# ಶಾಸನಗಳಲ್ಲಿ ತಳವಾರರು: ಒಂದು ಅಧ್ಯಯನ

(ಎಂ.ಫಿಲ್., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನ ಸಂಪ್ರಬಂಧ)


ಸಂಶೋಧಕರು

ರಮೇಶ್. ಸಿ.

ನೋಂದಣಿ ಸಂಖ್ಯೆ: ೧೬೦೧೧೯೦೩೦೦೨೫

ಮಾರ್ಗದರ್ಶಕರು

ಡಾ. ಕಲವೀರ ಮನ್ವಾಚಾರ

ಪ್ರಾಧ್ಯಾಪಕರು





ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬.


೨೦೧೬-೨೦೧೭

# ಶಾಸನಗಳಲ್ಲಿ ತಳವಾರರು: ಒಂದು ಅಧ್ಯಯನ

(ಎಂ.ಫಿಲ್, ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನ ಸಂಪ್ರಬಂಧ)

ಸಂಶೋಧಕರು

ರಮೇಶ್. ಸಿ.

ನೋಂದಣಿ ಸಂಖ್ಯೆ: ೧೬೦೧೮೦೩೦೦೨೫

ಮಾರ್ಗದರ್ಶಕರು

ಡಾ. ಕಲವೀರ ಮನ್ವಾಚಾರ

ಪ್ರಾಧ್ಯಾಪಕರು



ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೬-೧೭

# ಸಂಶೋಧಕರ ಪ್ರಮಾಣ ಪತ್ರ

**ಶಾಸನಗಳಲ್ಲಿ ತಳವಾರರು: ಒಂದು ಅಧ್ಯಯನ**. ಎಂಬ ಸಂಪ್ರಬಂಧವನ್ನು **ಡಾ. ಕಲವೀರ ಮನ್ವಾಚಾರ** ಪ್ರಾಧ್ಯಾಪಕರು, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿದ್ದೇನೆ. ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ರಮೇಶ್.ಸಿ**

ಸಂಶೋಧನ ವಿದ್ಯಾರ್ಥಿ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: 30/08/17

# ಮಾರ್ಗದರ್ಶಕರ ದೃಢೀಕರಣ ಪತ್ರ

**ಶಾಸನಗಳಲ್ಲಿ ತಳವಾರರು: ಒಂದು ಅಧ್ಯಯನ.** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ರಮೇಶ್**.ಸಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

30/05

**ಡಾ. ಕಲವೀರ ಮನ್ವಾಚಾರ**

**ಮಾರ್ಗದರ್ಶಕರು**

ಶಾಸನಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

ಸ್ಥಳ: ವಿದ್ಯಾರಣ್ಯ

ದಿನಾಂಕ:

## ಪರಿವಿಡಿ

# ಅಧ್ಯಾಯ ೧

## ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ಸ್ವರೂಪ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ಸ್ವರೂಪ

# ಅಧ್ಯಾಯ –೧

## ಅಧ್ಯನಯದ ಉದ್ದೇಶ ಮತ್ತು ವ್ಯಾಪ್ತಿ

ಒಂದು ಬಗೆಯ ವೃತ್ತಿ ಆಧಾರಿತ ಜನ ಸಮುದಾಯದ ಅಧ್ಯಯನವೆಂದರೆ ಅವರು ರೂಡಿಸಿಕೊಂಡು ಬಂದಿರುವ ಜೀವನ ಮೌಲ್ಯಗಳ ಅಧ್ಯಯನವೇ ಆಗಿದೆ. ಈ ದೃಷ್ಟಿಯಿಂದ ತಳವಾರರ ವೃತ್ತಿ ಮತ್ತು ಜೀವನ ಮೌಲ್ಯಗಳನ್ನು ಕಂಡುಕೊಳ್ಳುವುದೇ ಪ್ರಸ್ತುತ ಅಧ್ಯಯನದ ಮೂಲ ಉದ್ದೇಶವಾಗಿದೆ.

ಇಲ್ಲಿ ಸಂಸ್ಕೃತಿ ಮತ್ತು ಆಚರಣೆಗಳೆಂದರೆ ಆಯಾ ಜಾನಾಂಗ ತಲೆತಲಾಂತರಗಳಿಂದ ರೂಢಿಸಿಕೊಂಡು ಬಂದ ಮೌಲ್ಯಗಳೇ ಆಗಿರುತ್ತವೆ. ಜನಸಮುದಾಯಗಳಲ್ಲಿ ಸಂಸ್ಕೃತಿ ಮತ್ತು ಆಚರಣೆಗಳು ಇಲ್ಲದ ಯಾವುದೇ ಜನಾಂಗವನ್ನು ಕಾಣಲು ಸಾದ್ಯವಿಲ್ಲ. ಮಾನವನನ್ನು ಇನ್ನಿತರೆ ಜೀವಿಗಳಿಗಿಂತ ಬೇರೆ ರೀತಿಯಲ್ಲಿ ಕಾಣಲು ನಮಗಿರುವ ಆಧಾರವೇ ಅವನ ಆಚಾರ ವಿಚಾರ ಮತ್ತು ಸಂಸ್ಕೃತಿಯೇ ಆಗಿದೆ. ಇತರ ಜೀವಿಗಳಲ್ಲಿ ಸಮಾಜಿಕ ಸ್ವರೂಪಗಳನ್ನು ನಾವು ಅವುಗಳ ಜೈವಿಕ ಆಧಾರದಲ್ಲಿ ಗುರುತಿಸುವುದಾದರೆ, ಮಾನವ ಸಮಾಜವನ್ನು ಜೈವಿಕ ಅಂಶಗಳಿಗಿಂತ ಭಿನ್ನವಾಗಿ ಸಂಸ್ಕೃತಿಯ ಆಧಾರದಲ್ಲಿ ಹಾಗೂ ಇದೇ ಅಂಶದಿಂದ ಪ್ರಾಣಿ ಸಮಾಜವನ್ನು ಜೈವಿಕ ಮಾನವ ಸಮಾಜವನ್ನು ಸಾಂಸ್ಕೃತಿಕ ಸಮಾಜವೆಂದು ಗುರುತಿಸಲಾಗುತ್ತದೆ. ಈ ಸಂಸ್ಕೃತಿಯ ಕಾರಣದಿಂದಾಗಿಯೇ ಮಾನವನು ಎಲ್ಲಾ ಪ್ರಾಣಿಗಳಿಗಿಂತ ಮೇಲ್ಪಟ್ಟದವನಾಗಿ ತನ್ನ ಬದುಕಿನಂತೆಯೇ ಇತರರ ಬದುಕನ್ನು ಗೌರವಿಸಿ ಸೌಹಾರ್ದ ಸಾಮರಸ್ಯಗಳ ಮೂಲಕ ಸಹಜೀವನಕ್ಕೆ ಅವಕಾಶ ಮಾಡಿಕೊಟ್ಟಿದ್ದಾನೆ. ಸಂಸ್ಕೃತಿಯನ್ನು ಮಾನವನು ತನ್ನ ಅಗತ್ಯಕ್ಕೆ ತಕ್ಕಂತೆ ರೂಪಿಸಿಕೊಳ್ಳುವುದರಿಂದ ವ್ಯಕ್ತಿ ತನ್ನಲ್ಲಿರುವ ಪ್ರಜ್ಞೆಯನ್ನು ಬಳಸಿಕೊಂಡು ತನ್ನ ಹಾಗೂ ಸಮಾಜದ ಅಭಿವೃದ್ಧಿಗೆ ಶ್ರಮಿಸಿದ್ದಾನೆ.

ಒಂದು ಸಂಸ್ಕೃತಿಯಿಂದ ಇನ್ನೊಂದು ಸಂಸ್ಕೃತಿಗೆ ಬದಲಾವಣೆಯಾಗುವುದಕ್ಕೆ ಪ್ರೇರಣೆ ಮನುಷ್ಯನೇ ಆಗಿದ್ದಾನೆ. ಈ ಸಂಸ್ಕೃತಿ ಮಾನವನ ಜೀವನವನ್ನು ಅರಿಯಲು ಕಾರಣವಾಗಿದೆ. ಅಂದರೆ ಸಂಸ್ಕೃತಿಯು ಮಾನವನ ಆಂತರಿಕ ಮತ್ತು ಬಾಹ್ಯ ಜೀವನವನ್ನು ಅಭಿವ್ಯಕ್ತಿಗೊಳಿಸುತ್ತದೆ. ಆ ಹಿನ್ನಲೆಯಲ್ಲಿ ತಮ್ಮದೇ ಆದ ಸಮೃದ್ಧ ಸಾಂಸ್ಕೃತಿಕ ಪರಂಪರೆಯನ್ನು ಕಟ್ಟಿಕೊಳ್ಳುತ್ತದೆ. ಇವೆಲ್ಲ ನಮ್ಮ ಸಂಸ್ಕೃತಿಯ ಒಳತಿರುಳನ್ನು ಅನಾವರಣ ಗೊಳಿಸುತ್ತವೆ. ಇವು ಮೇಲು ನೋಟಕ್ಕೆ ಕಾಣದಿದ್ದರೂ ಅವುಗಳ ಸತ್ವ ಮತ್ತು ಸ್ವಂತಿಕೆಗಳಿಂದಾಗಿ ಎಷ್ಟೋ ಕಾಲದಿಂದ ಉಳಿದುಕೊಂಡು ಬಂದಿವೆ. ಅವುಗಳ ಬದಲಾದ ಸ್ಥಿತಿಯಲ್ಲಿ ಅಧ್ಯಯನಕಾರರ ಗಮನ ಸಳೆದಿವೆ. ಇದೇ ರೀತಿಯ ಅಧ್ಯಯನಗಳಿಂದ ಒಂದೊಂದು ಸಮುದಾಯಗಳ ಆಚಾರ–ವಿಚಾರ, ರೀತಿ--ನೀತಿ, ನಂಬಿಕೆ, ಸಂಪ್ರದಾಯ, ವೃತ್ತಿಯ ವೈವಿಧ್ಯತೆ, ದೈವ, ದೇವರುಗಳನ್ನು ವಿಶ್ಲೇಷಿಸಲಾಗಿದೆ. ಈ ದೃಷ್ಟಿಯಲ್ಲಿ ತಳವಾರರ ವೃತ್ತಿ ಬದುಕಿನಲ್ಲಿನ

ಅಂಶಗಳು ಮತ್ತು ಅವರ ಸ್ಥಾನ ಮಾನಗಳ ಕುರಿತು ವಿಶ್ಲೇಷಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ತಳವಾರಿಕೆ ಅನ್ನುವುದು ತಲವರ,ತಳವಾರ,ತಲಾರಿಕೆ,ತಲಾರ, ತಳಾರ ಇತ್ಯಾದಿ ರೂಪಗಳಲ್ಲಿ ಸಿಗುತ್ತದೆ. ಈ ಎಲ್ಲಾ ರೂಪಗಳಿಗೆ ಸಾಮಾನ್ಯವಾಗಿ ಒಂದೇ ಅರ್ಥ ಇದೆ. ಅದು ಗ್ರಾಮರಕ್ಷಣೆ, ಗ್ರಾಮಕಾವಲು, ಸಹಾಯಕ ಖಡ್ಗವನ್ನು ಹಿಡಿದು ಗ್ರಾಮವನ್ನು ರಕ್ಷಿಸುವವನು

ಗ್ರಾಮದ ಕಾವಲುಗಾರ, ತಳವಾರ ಎಂದು ಹಲವಾರು ರೀತಿಯಲ್ಲಿ ಕರೆಯಲಾಗುತ್ತದೆ. ತಳವಾರಿಕೆಯನ್ನು ಹಳ್ಳಿಯ ಗಟ್ಟಿಮುಟ್ಟಾದ ಹಿಂದುಳಿದ ವರ್ಗಗಳ ವ್ಯಕ್ತಿಗಳು ಕೈಗೊಳ್ಳುತ್ತಾ ಬಂದಿದ್ದಾರೆ. ಅದರಲ್ಲೂ ಹೆಚ್ಚಾಗಿ ಬೇಡ ನಾಯಕ ಸಮುದಾಯದವರು ಈ ವೃತ್ತಿಯನ್ನು ಹೆಚ್ಚಾಗಿ ಅವಲಂಬಿಸಿದ್ದಾರೆ. ಕೈಯಲ್ಲೊಂದು ಕೋಲು ಅಥವಾ ಖಡ್ಗವನ್ನು ಹಿಡಿದು ಗ್ರಾಮ ಶಾಂತಿಗಾಗಿ ಗಸ್ತು ತಿರುಗುವುದು ಕೋಟೆ ದಿಡ್ಡಿ ಬಾಗಿಲುಗಳನ್ನು ಕಾಯುವುದು ಗ್ರಾಮದಲ್ಲಿ ಅಶಾಂತಿಗೆ ಎಡೆಗೊಡದಂತೆ ಎಚ್ಚರ ವಹಿಸುವುದು, ಕಳ್ಳಕಾಕರಿಂದ ಗ್ರಾಮವನ್ನು ರಕ್ಷಸಿಸುವುದು, ಅನೈತಿಕ ಚಟುವಟಿಕೆಗಳು ನಡೆಯದಂತೆ ಗಮನ ಹರಿಸುವುದು, ಗೌಡ ಕುಲಕರ್ಣಿಯವರ ಜೊತೆ ಕಂದಾಯ ವಸೂಲಿಗೆ ಹೋಗುವುದು, ಹಬ್ಬಹರಿದಿನ, ಜಾತ್ರೆ ಉತ್ಸವಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಶಾಂತಿ ಕದಡದಂತೆ ನೋಡಿಕ್ಕೊಳ್ಳುವುದು ತಳವಾರನ ಪ್ರಮುಖ ಕರ್ತವ್ಯವಾಗಿತ್ತು.

ತಳವಾರಿಕೆ ಗ್ರಾಮದ ಕೆಲವು ಮನೆತನಕ್ಕೆ ಮಾತ್ರ ಸೀಮಿತವಾದದ್ದು. ಊರಿನ ಎಲ್ಲಾ ಸಮುದಾಯದವರಿಗೆ ತಳವಾರಿಕೆ ಮಾಡುವ ಹಕ್ಕು ಇಲ್ಲ. ತಳವಾರನು ಗ್ರಾಮಕ್ಕೆ ನೀಡುವ ಸೇವೆಗಾಗಿ ಧಾನ್ಯಗಳ ರೂಪದಲ್ಲಿ ಆಯಾ ಕೊಡುವುದು ಜಮೀನುಗಳನ್ನು ನೀಡುತ್ತಿದ್ದರು. ಇಂತಹ ವ್ಯಕ್ತಿಯನ್ನು ವಂಶಪಾರಂಪರ್ಯವಾಗಿ ಮುಂದುವರಿಸಿಕೊಂಡು ಬಂದಿರುವ ತಳವಾರರ ಕುರಿತಾಗಿ ಒಂದು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ಉದ್ದೇಶ**

ತಳವಾರಿಕೆ ವೃತ್ತಿ ಗ್ರಾಮೀಣ ಜನ ಜೀವನದಲ್ಲಿ ಪ್ರಮುಖ ಪಾತ್ರ ವಹಿಸಿದೆ. ಪ್ರಾಚೀನ ಕಾಲದಿಂದಲೂ ರಕ್ಷಣೆಯ ಹೊಣೆ ತಳವಾರನದಾಗಿತ್ತು. ರಾಜ ಪ್ರಭುತ್ವ ಪಾಳೆಯಪಟ್ಟು ಸಾಮಂತರಲ್ಲಿ ಸೇವಕನಾಗಿ ದುಡಿದ ತಳವಾರ ಗ್ರಾಮಾಡಳಿತ ವ್ಯವಸ್ಥೆಯಲ್ಲಿ ಪ್ರಮುಖ ವ್ಯಕ್ತಿಯಾಗಿ ಕಾಣುತ್ತಾನೆ. ತಳವಾರರ ಜೀವನ ಸಾಂಘಿಕವಾದದ್ದು. ಇವರ ಕೌಟುಂಬಿಕ ಪದ್ದತಿ, ಪಂಚಾಯಿತಿ ವ್ಯವಸ್ಥೆ, ಆರ್ಥಿಕ ವ್ಯವಸ್ಥೆಯನ್ನು ಹೊಂದಿದ್ದು, ಸಾಮಾಜಿಕ ವ್ಯವಸ್ಥೆಯಲ್ಲಿ ಸಬಲರಾಗಿದ್ದಾರೆ. ಈ ಮೂಲಕ ತಮ್ಮದೇ ಆದ ವೈಶಿಷ್ಟ್ಯತೆಯನ್ನು ರೂಢಿಸಿಕೊಂಡಿದ್ದಾರೆ. ಒಂದು ಸಮಾಜದ ಮಡಿಲಲ್ಲಿ ಜೀವಿಸುತ್ತಿರುವ ಇವರು ಇತರ ಸಮುದಾಯದೊಂದಿಗೂ ಸಮಾಜಿಕ ಬಾಂಧವ್ಯವನ್ನು ಹೊಂದಿದ್ದಾರೆ.

ತಳವಾರಿಕೆ ತಲೆತಲಾಂತರದಿಂದ ಬಂದಂತಹ ವೃತ್ತಿ. ಈ ವೃತ್ತಿ ಹಿನ್ನಲೆ ಏನು? ತಳವಾರರು ಯಾರು? ಇವರ ಪರಂಪರೆಯಂತಹದ್ದು? ಇವರ ಪ್ರಮುಖ ಆಚರಣೆಗಳೇನು? ಪ್ರಸ್ತುತ ದಿನಮಾನದಲ್ಲಿ ಇವರ ಸ್ಥಾನ ಮಾನ ಹಾಗೂ ಪರಿಸ್ಥಿತಿಗಳೇನು? ಎಂಬ ಸಂಗತಿಗಳನ್ನು ಚರ್ಚಿಸಲಾಗಿದೆ.

ತಲೆತಲಾಂತರದಿಂದ ವಂಶಪಾರಂಪರ್ಯವಾಗಿ ಬಂದ ಈ ವೃತ್ತಿ ಇಂದು ಕಣ್ಮರೆಯಾಗುತ್ತಿದೆ. ಕಾರಣ ಆಧುನಿಕ ಶಿಕ್ಷಣ ವ್ಯವಸ್ಥೆ, ಆಡಳಿತ ವ್ಯವಸ್ಥೆ ಕಾರಣವಾಗಿವೆ. ಕಾಲದಿಂದ ಕಾಲಕ್ಕೆ ವೃತ್ತಿಗಳು ಬದಲಾಗಿ, ಬದಲಾದ ಸಾಮಾಜಿಕ ವ್ಯವಸ್ಥೆಗೆ ಹೊಂದಿಕೊಳ್ಳುವ ಅನಿವಾರ್ಯತೆ ಸಹಜವಾಗಿ ಎದುರಾಗುತ್ತದೆ. ಆಗಾಗಿ ಇಂದು ತಳವಾರಿಕೆ ಕುಟುಂಬದವರು ಸಹಜವಾಗಿ ಬೇರೆ ವೃತ್ತಿಯನ್ನು ಮಾಡುವ ಅನಿವಾರ್ಯತೆ ಸೃಷ್ಠಿಯಾಗಿದೆ. ಇಂದಿನ ಆಧುನಿಕ, ಸಾಮಾಜೀಕರಣ, ಸಂಸ್ಕೃತೀಕರಣ ಹಾಗೂ ಯಾಂತ್ರೀಕರಣ ಜೀವನದಿಂದಾಗಿ ಗ್ರಾಮಗಳಲ್ಲಿ ತಳವಾರನಿಗೆ ಅಷ್ಟಾಗಿ ಪ್ರಾಶಸ್ತ್ಯ ಕೊಡುತ್ತಿಲ್ಲ. ಹೀಗಾಗಿ ಈ ವೃತ್ತಿಯು ಪ್ರಸ್ತುತ ದಿನಗಳಲ್ಲಿ ಅವಸಾನದ ಅಂಚಿನಲ್ಲಿದೆ. ಈ ಅವಸಾನದ ಅಂಚಿನಲ್ಲಿರುವ ತಳವಾರಿಕೆ ಮತ್ತು ಆಯಾ ವೃತ್ತಿ ಸಮುದಾಯದ ಹಿನ್ನಲೆ ಮತ್ತು ಅವರ ಒಟ್ಟಾರೆ ಬದುಕಿನ ರೀತಿಯನ್ನು ದಾಖಲಿಸುವ ಉದ್ದೇಶವನ್ನು ಇಟ್ಟುಕೊಂಡಿದೆ.

ತಳವಾರರು ಸಮಾಜಿಕ ಸಮುದಾಯಗಳೊಂದಿಗೆ ಅವಿನಾಭಾವ ಸಂಬಂಧ ಹೊಂದಿರುವುದು ಕಂಡುಬರುತ್ತದೆ. ತಳವಾರ ವೃತ್ತಿಯ ಬಗೆಗೆ ಶಾಸನ ಐತಿಹ್ಯ ಹಾಗೂ ಜಾನಪದದಲ್ಲಿ ತಳವಾರಿಕೆ ವೃತ್ತಿಯ ಉಲ್ಲೇಖಗಳು ಸಿಗುತ್ತವೆ. ಹೀಗೆ ಉಲ್ಲೇಖಗೊಂಡ ತಳವಾರಿಕೆ ಸಂಗತಿಗಳನ್ನು ಗುರುತಿಸಿ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಿ ಸಾಂಸ್ಕೃತಿಕ ಬದುಕಿನಲ್ಲಿ ತಳಾರಿಕೆಯ ಮಹತ್ವವನ್ನು ಅರಿಯುವುದಾಗಿದೆ.

ತಳವಾರಿಕೆ ವೃತ್ತಿಯ ಮೂಲಕ ಸಾಮಾಜಿಕ ಆವರಣದಲ್ಲಿ ಇವರು ರೂಢಿಸಿಕೊಂಡು ಬಂದ ಸಾಂಸ್ಕೃತಿಕ ಮೌಲ್ಯ ಬದಲಾದ ಸಂದರ್ಭದಲ್ಲಿ ಕಟ್ಟಿಕೊಂಡ ಜೀವನ ಅದರೊಂದಿಗೆ ಹೊಂದಿರುವ ಸಂಸ್ಕೃತಿ, ಧರ್ಮ, ಇವೆಲ್ಲವೂ ಭಿನ್ನ ಹಾಗೂ ವಿಶೇಷತೆಯಿಂದ ಕೂಡಿವೆ. ಇವೆಲ್ಲವನ್ನು ಅಧ್ಯಯನಕ್ಕೆ ಒಳಪಡಿಸಿದೆ. ಒಂದು ವೃತ್ತಿ ಹಿನ್ನೆಲೆಯಿಂದ ಬಂದವರು ಸಮಾಜದಲ್ಲಿ ಹೇಗೆ ಒಂದು ನಿಶ್ಚಿತ ಸ್ಥಾನಮಾನ ಪಡೆದುಕೊಂಡರು ಎಂಬುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ತಳವಾರರು ಚರಿತ್ರೆಯಲ್ಲಿ ಪೂರ್ಣ ಪ್ರಮಾಣದಲ್ಲಿ ದಾಖಲಾಗದಿದ್ದರೂ ಬೇರೆ ಬೇರೆ ಬಗೆಯಲ್ಲಿ ಉಲ್ಲೇಖಗೊಂಡಿರುವುದು ಸ್ಪಷ್ಟವಾಗಿದೆ. ಈ ಕಾರಣದಿಂದ ಒಂದೆಡೆ ಇವರನ್ನು ಅಧ್ಯಯನಕ್ಕೆ ಒಳಪಡಿಸಿ ಆ ಮೂಲಕ ಅವರ ಜೀವನ ವೃತ್ತಾಂತವನ್ನು ಕಟ್ಟಿಕೊಡುವುದಾಗಿದೆ. ಒಟ್ಟಾರೆಯಾಗಿ ತಳವಾರರ ಕುರಿತಾಗಿ ಬಂದ ಆಕರಗಳನ್ನು ಮತ್ತು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ಆಧರಿಸಿ ಈ ಅಧ್ಯಯನವನ್ನು ನಡೆಸಲಾಗಿದೆ.

## ಅಧ್ಯಯನದ ವ್ಯಾಪ್ತಿ

ತಳವಾರರು ಅಥವಾ ತಳವಾರಿಕೆ ವೃತ್ತಿಯು ನಮ್ಮ ರಾಜ್ಯದ ಬಹುತೇಕ ಜಿಲ್ಲೆಗಳಲ್ಲಿ ಕಂಡುಬರುತ್ತ ದೆ. ಅದರಲ್ಲೂ ಮುಖ್ಯವಾಗಿ ಚಿತ್ರದುರ್ಗ,ಬಳ್ಳಾರಿ,ಕೊಪ್ಪಳ,ಧಾರವಾಡ,ವಿಜಯಪುರ, ಕಲಬುರ್ಗಿ, ಬಾಗಲಕೋಟೆ, ಹಾವೇರಿ ಜಿಲ್ಲೆಗಳನ್ನು ಮುಖ್ಯವಾಗಿರಿಸಿಕೊಂಡು ಅಧ್ಯಯನ ನಡೆಸಲಾಗಿದೆ. ಹಾಗೆಯೇ ದಕ್ಷಿಣ ಕರ್ನಾಟಕದ ಕೆಲವು ಜಿಲ್ಲೆಗಳನ್ನು ಸಾಂದರ್ಭಿಕವಾಗಿ ಪರಿಗಣಿಸುವ ಮೂಲಕ ಅಧ್ಯಯನದ ವ್ಯಾಪ್ತಿಯನ್ನು ಇಟ್ಟುಕೊಳ್ಳಲಾಗಿದೆ. ಈ ಎಲ್ಲಾ ಜಿಲ್ಲೆಗಳ ಕೆಲವು ಗ್ರಾಮಗಳಲ್ಲಿ ಕ್ಷೇತ್ರ ಕಾರ್ಯ ಕೈಗೊಂಡು ವ್ಯಕ್ತಿಗಳಿಂದ ದೊರೆತ ಮತ್ತು ಚಿತ್ರದುರ್ಗದ ಸುತ್ತಮುತ್ತಲಿನ ಕೆಲವು ಗ್ರಾಮಗಳಲ್ಲಿ ವ್ಯಕ್ತಿಗಳು ನೀಡಿದ ಮಾಹಿತಿಯನ್ನು ಆಧರಿಸಿ ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಂಡು ವಿಶ್ಲೇಷಿಸಿದೆ. ತಳವಾರ ಮತ್ತು ತಳವಾರಿಕೆಯ ವೃತ್ತಿ, ತಳವಾರ ಪದದ ನಿಷ್ಪತ್ತಿ ಮತ್ತು ತಳವಾರರ ಹುಟ್ಟು ಬೆಳವಣಿಗೆ ಅವರ ಆಚರಣೆಗಳು ಹಾಗೂ ಅವರ ಹಿನ್ನಲೆಯನ್ನು ಮತ್ತು ಶಾಸನಗಳಲ್ಲಿ ತಳವಾರರಿಗಿರುವ ಮಹತ್ವವನ್ನು ಗಮನದಲ್ಲಿ ಇಟ್ಟುಕೊಂಡು ತಳವಾರ ಮತ್ತು ತಳವಾರಿಕೆಯ ಸ್ವರೂಪವನ್ನು ಕುರಿತು ವಿವರಿಸಲಾಗಿದೆ. ಹಾಗೂ ತಳವಾರರ ಬಗ್ಗೆ ಸಿಗುವ ಕೆಲವು ಆಕರಗಳಲ್ಲಿ ಅಡಗಿರುವ ಸತ್ಯಸಂಗತಿಗಳನ್ನು ಮತ್ತು ಅವುಗಳ ಸ್ವರೂಪವನ್ನು ತಿಳಿಸಲಾಗಿದೆ.

## ಅಧ್ಯಯನದ ಸ್ವರೂಪ

ತಳವಾರರ ವೃತ್ತಿ ಹಿನ್ನಲೆ ಮತ್ತು ಪರಂಪರೆಯಿಂದ ಆರಂಭಿಸಿ ಈ ವೃತ್ತಿಯಲ್ಲಿ ಹೆಚ್ಚು ಸಂಖ್ಯೆಯಲ್ಲಿ ಕಂಡುಬರುವ ಬೇಡನಾಯಕರನ್ನು ಕೇಂದ್ರೀಕರಿಸಿ ಅವರ ವೃತ್ತಿಯ ಮಹತ್ವದ ಕಡೆಗೆ ಗಮನ ಹರಿಸಲಾಗಿದೆ. ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ವರೆಗೆ ಪ್ರಕಟಗೊಂಡ ಜಾನಪದ ಸಾಹಿತ್ಯ ದೇಶಿ, ವಿದೇಶಿ ಬರಹಗಳು ಮತ್ತು ಶಾಸನ, ವೀರಗಲ್ಲು, ಸ್ಮಾರಕ, ಆಯುಧಗಳು ಮುಂತಾದ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಈ ಆಕರಗಳಲ್ಲಿ ತಳವಾರರ ಕುರಿತಾಗಿ ವಿವರಿಸಿರುವ ಭಾಗಗಳನ್ನು ಸಂಗ್ರಹಿಸಿ ಚರ್ಚಿಸಲಾಗಿದೆ. ಹಾಗೂ ಕ್ಷೇತ್ರ ಕಾರ್ಯ ಮತ್ತು ವ್ಯಕ್ತಿಗಳು ನೀಡಿರುವ ಮಾಹಿತಿಯ ಆಧಾರದಿಂದ ತಳವಾರರ ವೃತ್ತಿ, ಆಚರಣೆ, ಮತ್ತು ಸಂಸ್ಕೃತಿಯನ್ನು ವಿವರಿಸಲಾಗಿದೆ.

ತಳವಾರರು ಬೇಡನಾಯಕ ಜಾತಿಯಲ್ಲಿ ಒಂದು ಉಪಪಂಗಡದವರು ಆಗಿದ್ದಾರೆ. ಪ್ರಚಲಿತ ವಿರುವ ತಳವಾರಿಕೆ ಮತ್ತು ಹಿಂದೆ ತಳವಾರಿಕೆ ವೃತ್ತಿ ಯಾವ ರೀತಿ ಇತ್ತು ಎಂಬುದನ್ನು ಕೆಲವು ಆಕರಗಳನ್ನು ಬಳಸಿಕೊಂಡು ತಳವಾರರ ಹುಟ್ಟು ಬೆಳವಣಿಗೆ ಹಾಗೂ ಅವರ ಹಿನ್ನಲೆಯನ್ನು ಮತ್ತು ಬುಡಕಟ್ಟುವಿನಲ್ಲಿ ನಾಯಕರ ಜೀವನ ವಿಧಾನ ಮತ್ತು ಆಚರಣೆಗಳ ಬಗ್ಗೆ ಪ್ರಸ್ತತ ಅವರ ಜೀವನದ ಸ್ಥಿತಿಗತಿಗಳನ್ನು ಕುರಿತು ಐದು ಅಧ್ಯಾಯಗಳಲ್ಲಿ ವಿವರಿಸಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮತ್ತು ಅಧ್ಯಯನದ ಸ್ವರೂಪವನ್ನು ಕುರಿತು ತಿಳಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಬೇಡ ಬುಡಕಟ್ಟು ಸಮುದಾಯದ ಪರಿಚಯ ಮಾಡಿಕೊಡಲಾಗಿದೆ ಹಾಗೂ ಬುಡಕಟ್ಟು ಸಮುದಾಯಗಳ ಬಗ್ಗೆ ಕೆಲವು ವಿದ್ವಾಂಸರು ನೀಡಿರುವ ವ್ಯಾಖ್ಯೆಗಳನ್ನು ಪಟ್ಟಿಮಾಡಲಾಗಿದೆ. ಜೊತೆಗೆ ಬುಡಕಟ್ಟು ಪದದ ವಿವರ, ಬುಡಕಟ್ಟು ನೆಲೆಯಲ್ಲಿ ಬೇಡರನ್ನು ಪರಿಚಯಿಸಿ, ಬೇಡ ಬುಡಕಟ್ಟಿನ ವೈಶಿಷ್ಟಗಳ ಬಗ್ಗೆ ತಿಳಿಸಲಾಗಿದೆ.

ಅಧ್ಯಾಯ ಮೂರರಲ್ಲಿ ತಳವಾರರ ಚಾರಿತ್ರಿಕ ಹಿನ್ನಲೆ, ಸಮುದಾಯದ ಹಿನ್ನಲೆ, ವೃತ್ತಿಯ ಹಿನ್ನಲೆಯ ಬಗ್ಗೆ ತಿಳಿಸಲಾಗಿದೆ. ಹಾಗೂ ತಳವಾರ ಪದದ ನಿಷ್ಪತ್ತಿ, ನಂತರ ಗ್ರಾಮಾಡಳಿತದಲ್ಲಿ ತಳವಾರರು ತಮ್ಮ ಆಡಳಿತವನ್ನು ಯಾವ ರೀತಿ ಮಾಡುತ್ತಿದ್ದರು ಎಂಬುದನ್ನು ಅಧ್ಯಾಯ ಮೂರರಲ್ಲಿ ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ತಳವಾರರು ಶಾಸನಗಳಲ್ಲಿ ಹೇಗೆ ಕಾಣಿಸಿಗುತ್ತಾರೆ ಮತ್ತು ತಳವಾರಿಕೆಯ ವೃತ್ತಿಗೆ ದೊರತಿರುವ ಮಹತ್ವವನ್ನು ಹೇಗೆ ತಿಳಿಸುತ್ತವೆ. ಎಂದು ವಿವರಿಸಲಾಗಿದೆ. ಅದೇ ರೀತಿ ವೀರಗಲ್ಲುಗಳಲ್ಲಿ, ಜಾನಪದದಲ್ಲಿ, ಕನ್ನಡ ಕೈಫಿಯತ್ತುಗಳಲ್ಲಿ ತಳವಾರರ ಕೊಡುಗೆಗಳು ಮತ್ತು ಜೀವನ ವಿಧಾನಗಳನ್ನು ಹೇಗೆ ವ್ಯಕ್ತಪಡಿಸಿವೆ ಎಂದು ವಿವರಿಸಲಾಗಿದೆ.

ಅಧ್ಯಾಯ ಐದರಲ್ಲಿ ತಳವಾರರ ಚಿತ್ರಣವನ್ನು ಮತ್ತು ಬುಡಕಟ್ಟುಗಳಲ್ಲಿ ಬೇಡ ನಾಯಕರ ಸ್ಥಿತಿಗತಿಗಳು ಮತ್ತು ಅವರ ಆಚಾರ ವಿಚಾರಗಳ ಬಗ್ಗೆ ವಿಶ್ಲೇಷಿಸಲಾಗಿದೆ. ಕೊನೆಯಲ್ಲಿ ವ್ಯಕ್ತಿಗಳಿಂದ ದೊರೆತ ಮಾಹಿತಿ ಹಾಗೂ ಛಾಯಚಿತ್ರಗಳನ್ನು ಪರಾಮರ್ಶನ ಗ್ರಂಥಗಳನ್ನು ಪಟ್ಟಿಮಾಡಲಾಗಿದೆ.

## ಅಧ್ಯಾಯ ೨

## ಬೇಡ ಬುಡಕಟ್ಟು ಸಮುದಾಯದ ಪರಿಚಯ

೨.೧. ಬುಡಕಟ್ಟು ಸಮುದಾಯದ ವ್ಯಾಖ್ಯೆಗಳು

೨.೨. ಬಡಕಟ್ಟು ಪದದ ವಿವರ

೨.೩. ಬುಡಕಟ್ಟು ನೆಲೆಯಲ್ಲಿ ಬೇಡರು

೨.೪. ಬೇಡ ಬುಡಕಟ್ಟಿನ ವೈಶಿಷ್ಟ್ಯಗಳು

## ಅಧ್ಯಾಯ ೨

## ಬೇಡ ಬುಡಕಟ್ಟು ಸಮುದಾಯದ ಪರಿಚಯ

ಸುಮಾರು ೩೦೦೦೦ ವರ್ಷಗಳ ಹಿಂದಯೇ ಮಾನವ ಗುಂಪಾಗಿ ಬದುಕಿ ಗುಂಪಿನ ಹಿತಾಸಕ್ತಿಗಾಗಿ ಹೋರಾಡಿದ್ದಾನೆ. ಇದರ ಪ್ರತಿಫಲವಾಗಿ ಬುಡಕಟ್ಟುಗಳು ಉಗಮಗೊಂಡವು. ಪ್ರತಿಯೊಂದು ಬುಡಕಟ್ಟು ಒಬ್ಬ ಪೂರ್ವಜನ ರಕ್ತ ಸಂಬಂಧಿಗಳಾಗಿದ್ದು ನೂರಾನು ಸಂಖ್ಯೆಯಲ್ಲಿ ಇರುತ್ತಿದ್ದರು. ಅವರೆಲ್ಲರೂ ಒಂದೇ ಗುಹೆಯಲ್ಲಿ ಇಲ್ಲವೇ ಗುಡಿಸಿಲಿನಲ್ಲಿ ವಾಸವಗಿರುತ್ತಿದ್ದರು.

ಪುರುಷರು ಬೇಟೆಯಾಡುವುದರಲ್ಲಿ ನಿರತರಾಗಿದ್ದರೆ, ಸ್ತ್ರೀಯರು ತಿನ್ನುವ ಸಸ್ಯಗಳನ್ನು ಸಂಗ್ರಹಿಸುವದರೊಂದಿಗೆ ಮಕ್ಕಳ ಲಾಲನೆ ಪಾಲನೆ ಮಾಡುತ್ತಿದ್ದರು. ಮತ್ತು ಚರ್ಮದ ಕೊಬ್ಬನ್ನು ಸ್ವಚ್ಚಗೊಳಿಸಿ ಉಡಲು ಅಣಿಗೊಳಿಸುತ್ತಿದ್ದರು. ಮಕ್ಕಳು ಹಿರಿಯರಿಗೆ ಮನೆಗೆಲಸಗಳಲ್ಲಿ ಸಹಾಯ ಹಸ್ತ ನೀಡುತ್ತಿದ್ದರು. ಪುರುಷರು ತಂದ ಆಹಾರವನ್ನು ಸ್ತ್ರೀಯರು ಬಂಧು ಬಳಗಕ್ಕೆಲ್ಲ ಹಂಚುತ್ತಿದ್ದರು. ಚರ್ಮ ಎಲುಬು ಹಾಗೂ ಕೊಂಬುಗಳು ಎಲ್ಲರ ಆಸ್ತಿಯಾಗಿರುತ್ತಿದ್ದವು. ಕುಲದ ಹಿರಿಯರು ಮತ್ತು ಅನುಭವಿಗಳು ಬೇಟೆಯ ವಿಧಿವಿಧಾನಗಳನ್ನು ನಿರ್ದೇಶಿಸುತ್ತಿದ್ದರು. ಮತ್ತು ಭೇಟೆಯ ಪಾಲು ಹಂಚುತ್ತಿದ್ದರು. ಹೀಗೆ ಎಲ್ಲಾ ರಕ್ತ ಸಂಬಂಧಿಗಳೂ ಜೊತೆ ಗೂಡಿ ಗುಂಪಿನಲ್ಲಿ ಇದ್ದು ಕೂಡಿ ಕೆಲಸ ಮಾಡುವದರೊಂದಿಗೆ ಎಲ್ಲರೂ ಜಂಟಿಯಾಗಿ ಆಸ್ತಿಯನ್ನು ಹೊಂದಿ ಅನುಭವಿಸುವವರಿಗೆ ಕುಲದವರು ಅಥವಾ ಕುಲ ಸಮುದಾಯದವರೆಂದು ಕರೆದರು. ಗುಂಪು ಜೀವನಕ್ಕಿಂತ ರಕ್ತ ಸಂಬಂಧದ ಕುಲದ ಸಂಘಟನೆ ಹೆಚ್ಚಿನ ಬಾಳಿಕೆ ಉಳ್ಳದ್ದಾಯಿತು. ಮತ್ತು ಅಭಿವೃದ್ದಿ ಪರವಾಗಿತ್ತು. ಈ ತರಹದ ಜೀವನ ಕ್ರಮ್ಮಕೆ ಆದಿವಾಸಿ ಜೀವನ ಕ್ರಮ ಎಂದು ಕೆರೆಯುವರು.[೧]

### ೨.೧. ಬುಡಕಟ್ಟು ಸಮುದಾಯಗಳ ವ್ಯಾಖ್ಯೆಗಳು

"ಆದಿವಾಸಿಗಳು ಅಥವಾ ಬುಡಕಟ್ಟು ಸಮುದಾಯ ಎಂಬುದರ ಬಗ್ಗೆ ಮಾನವ ಶಾಸ್ತ್ರಜ್ಞರು ಮತ್ತು ಸಮಾಜಶಾಸ್ತ್ರಜ್ಞರು ನಿಖರವಾದ ಸಂಖ್ಯೆಯೊಂದನ್ನು ನೀಡುವುದರಲ್ಲಿ ವಿಫಲವಾಗಿದ್ದಾರೆ. ಪ್ರತಿಯೊಬ್ಬರು ತಮ್ಮದೇ ಆದ ವ್ಯಾಖ್ಯೆ ಹಾಗೂ ವ್ಯಾಖ್ಯಾನ ನೀಡುವ ಪ್ರಯತ್ನ ನಡೆಸಿದ್ದಾರೆ.

**ಡಾ. ಮಜುಮದಾರ್‌ರವರ ಪ್ರಕಾರ:**

ಒಂದೇ ನಾಮಧೇಯವನ್ನು ಹೊಂದಿರುವ ಒಂದೇ ಭೂನೆಲೆಯಲ್ಲಿ ವಾಸಿಸುವ ಒಂದೇ ಭಾಷೆಯನ್ನು ಆಡುವ ಮತ್ತು ವಿವಾಹ ಉದ್ಯೋಗಗಳಿಗೆ ಸಂಬಂಧಿಸಿದಂತೆ ಒಂದೇ ಬಗೆಯ ವಿಧಿನಿಷೇಧಗಳಿಗೆ ಬದ್ದವಾದ ಕುಟುಂಬಗಳ ಸಮೂಹವನ್ನು ಆಧಿವಾಸಿ ಸಮೂಹ ಎಂದು ಕರೆಯಬಹುದು ಎಂದು ಹೇಳಿದ್ದಾರೆ.

**ಡಬ್ಲ್ಯೂ ಜೆ ಪೆರ್ರಿ:**

ಒಂದು ಸ್ಥಳದಲ್ಲಿ ನೆಲೆಸಿಕೊಂಡು ಒಂದೇ ಭಾಷೆಯನ್ನಾಡುವ ಜನಸಮೂಹವನ್ನು ಆಧಿವಾಸಿ ಸಮೂಹ ಎಂದು ಕರೆಯಬಹುದು."[೨]

**೨.೨. ಬುಡಕಟ್ಟು ಪಥದ ವಿವರ**

"ಬುಡಕಟ್ಟು ಎಂಬ ಪದಕ್ಕೆ ಅರ್ಥವಿವರಣೆ ಕೊಡವುದು ಸುಲಭವಲ್ಲ ಈ ಪದವನ್ನು ಜೀವ ವಿಜ್ಞಾನಿಗಳು, ಮಾನವಶಾಸ್ತ್ರಜ್ಞನರು ಹಾಗೂ ಇತಿಹಾಸಕಾರರು ನಾನಾ ಅರ್ಥದಲ್ಲಿ ಬಳಸುತ್ತಿದ್ದಾರೆ. ಈ ಪದಕ್ಕೆ ಕಲ್ಪಿಸಿರುವ ತಪ್ಪು ಅರ್ಥದಿಂದ ಒಂದಷ್ಟು ತೊಡಕು ಉಂಟಾಗಿದೆ. ನಾಗರೀಕತೆ , ಸಂಸ್ಕೃತಿ ಜನಾಂಗ ಭಾಷೆ, ಧರ್ಮ, ಬುಡಕಟ್ಟು ಎಂಬ ಪದಗಳನ್ನು ಅಸ್ತವ್ಯಸ್ತವಾಗಿ ಒಂದೇ ಅರ್ಥದಲ್ಲಿ ಬಳಸಲಾಗಿದೆ. ಆದರೆ ಸಮಾಜಶಾಸ್ತ್ರಜ್ಞನರ ಧೃಷ್ಟಿಯಲ್ಲಿ ಈ ಪದಗಳೆಲ್ಲಕ್ಕೂ ಬೇರೆ ಬೇರೆ ಅರ್ಥಗಳಿವೆ. ಆರ್ಯರು, ಯಹೂದಿಯರು, ಆಗ್ಲೋಸ್ಯಾಕ್ಸನರು, ಫ್ರೆಂಚರು, ಜಿಪ್ಸಿಗಳು, ಮಂಗೋಲರು ಮೊದಲಾದ ಜನಾಂಗಗಳ ಬಗ್ಗೆ ಬುಡಕಟ್ಟು ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಅದರೆ ಆರ್ಯ ಎಂಬ ಪದ ಭಾರತ ಮತ್ತು ಪರ್ಷಿಯನ್ ಭಾಷೆಗಳ ಗುಂಪಿಗೆ ಅನ್ವಯಿಸುತ್ತದೆಯೇ ಹೊರತು ಆರ್ಯರ ಬುಡಕಟ್ಟು ಎಂಬುದಿಲ್ಲ ಅದೇ ರೀತಿ ಜರ್ಮನ್ ಮತ್ತು ಫ್ರೆಂಚ್ ಎಂಬ ಪದಗಳು ಜನಾಂಗಕ್ಕೆ ಅನ್ವಯಿಸುವುದೇ ಹೊರತು ಅವು ಪ್ರತ್ಯೇಕ ಬುಡಕಟ್ಟುಗಳು ಅಲ್ಲ, ಹಾಗೆಯೇ ಯಹೂದಿಯರು ಕೂಡ ಒಂದು ಧಾರ್ಮಿಕ ಪಂಥಕ್ಕೆ ಸೇರಿದವರೇ ಹೊರತು ಯಹೂದಿಯೆಂಬ ಪದ ಬುಡಕಟ್ಟನ್ನು ಸೂಚಿಸುವುದಿಲ್ಲ ಹಾಗೆಯೇ ಸಂಸ್ಕೃತಿಯ ಗುಣ, ನಡತೆ, ಸಭ್ಯತೆ, ಇತ್ಯಾದಿ ಆಂತರಿಕ ಅಂಶಗಳಿಗೆ ಅನ್ವಯಿಸುವುದೇ ವಿನಹ ವಂಶಾನುಗತವಾಗಿ ಸಾಗಿ ಬರುವ ದೈಹಿಕ ಲಕ್ಷಣಗಳಿಗೆ ಬುಡಕಟ್ಟು ಎಂಬ ಪದ ಅನ್ವಯಿಸುತ್ತದೆ. ಅದರಂತೆ ವಿಶ್ವದ ಜನಾಂಗಗಳನ್ನು ವರ್ಗಿಕರಿಸಿದೆ.

ಕಿಟೆಲ್ಲರು ತಮ್ಮ ಅರ್ಥಕೋಶದಲ್ಲಿ ಬುಡಕಟ್ಟು ಎಂಬ ಶಬ್ದಕ್ಕೆ ಕುಟುಂಬ ಹಾಗೂ ಕುಲ ಅರ್ಥವನ್ನು ನೀಡಿದ್ದಾರೆ. ಬುಡಕಟ್ಟು ಎಂಬ ಪದವು ಆಂಗ್ಲಭಾಷೆಯ "ಟ್ರೈಬ್" ಎಂಬ ಪದಕ್ಕೆ ಸಮಾನಾರ್ಥಕ ಪದವೆಂದು ಬಳಸಲಾಗುತ್ತಿದೆ. ಇಂದು ಲ್ಯಾಟಿನ್ ಭಾಷೆಯ "ಟ್ರೈಬಸ್" ಎಂಬ ಪದದಿಂದ ಉಗಮಗೊಂಡಿದೆ. ಗ್ರೀಕ್ ಮತ್ತು ರೋಮನ್ ಲೇಖಕರು ಲ್ಯಾಟಿಯಂ ಜಿಲ್ಲೆಯಲ್ಲಿ ನೆಲೆಸಿದ ಬುಡಕಟ್ಟಿನವರಿಗೆ ಪ್ರಥಮವಾಗಿ "ಟ್ರೈಬ್" ಎಂಬ ಪದ ಬಳಸಿರುವುದು ವೇದ್ಯವಾಗುತ್ತದೆ. ಸಮಾಜ ರಚನೆಯ ಮೂಲಕ್ಕೆ ಕುಟುಂಬ ಹಾಗೂ ರಕ್ತ ಸಂಬಂಧಿಯ ಕುಲಗಳು ಆಧಾರ ಸ್ತಂಭಗಳಾಗಿರುವುದರಿಂದ ಕುಟುಂಬ ಹಾಗೂ ರಕ್ತ ಸಂಬಂಧ ಹೊಂದಿದ ಕುಲಗಳ ಕೂಟಕ್ಕೆ ಕನ್ನಡದಲ್ಲಿ ಬುಡಕಟ್ಟು ಎಂಬ ಪದ ಬಳಸಿರುವುದು ಸಮಂಜಸವಾಗಿದೆ. ಬುಡಕಟ್ಟುಗಳಿಗೆ ಆದಿವಾಸಿ, ಮೂಲನಿವಾಸಿ, ಗಿರಿಜನ, ವನ್ಯಜಾತಿ, ಜನಜಾತಿ, ಎಂಬ ಹೆಸರುಗಳಿಂದಲೂ ಕರೆಯಲಾಗಿದೆ. ಒಂದು ನಿರ್ಧಿಷ್ಟ ಪ್ರದೇಶದಲ್ಲಿ ವಾಸಿಸುವ ಅಥವಾ ಅದನ್ನು ತನ್ನದು ಎಂದು ಹೇಳಿಕೊಳ್ಳುವಂತಹ

ರಾಜಕೀಯವಾಗಿ ಅಥವಾ ಸಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸ್ವಯಂ ಆಢಳಿತವುಳ್ಳ ಗುಂಪೇ ಬುಡಕಟ್ಟು ಎಂದು ಲಂಡನ್ನಿನ ರಾಯಲ್ ಆಂಥ್ರೂಪಾಲಾಜಿಕಲ್ ಇನ್‌ಸ್ಟಿಟ್ಯೂಟ್ ವ್ಯಾಖ್ಯಾನಿಸಿದೆ.

ಯಾವ ಜನ ಗತಕಾಲದಿಂದಲೂ ನಿಸರ್ಗದ ಮಡಿಲಲ್ಲಿ ಸುಖವಾಗಿ ಬದುಕಲು ಬಯಸುವದೊ ಪ್ರಕೃತಿ ಜನ್ಯ ಉತ್ಪನ್ನಗಳನ್ನೇ ಭಕ್ಷಿಸಲು ಯತ್ನಿಸುವುದೋ ತನ್ನದೇ ಆದ ಒಂದು ವಿಶಿಷ್ಟ ರೀತಿಯ ಜೀವನ ವಿಧಾನದಿಂದ ಜೀವಿಸುವ ಆಶಯವನ್ನು ಹೊಂದಿ ಆ ರೀತಿಯಲ್ಲಿಯೇ ಜೀವನ ನಡೆಸುವುದೊ ಆ ಜನಕ್ಕೆ ಆದಿವಾಸಿ ಅಥವಾ ಬುಡಕಟ್ಟು ಜನ ಎಂದು ಕರೆಯುತ್ತಾರೆ."[೩]

**ಬೇಡ ಬುಟಕಟ್ಟು ಜನಾಂಗದ ಪರಿಚಯ**

"ಮಾನವನ ಉಗಮದ ನಂತರ ಪ್ರತಿಯೊಬ್ಬರು ಬೇಟೆಗಾರರೇ ಆಗಿದ್ದರು. ವಿಕಾಸ ಹೊಂದುತ್ತಾ ಒಂದೊಂದೇ ಸಮುದಾಯಗಳು ಶ್ರೇಣಿಕೃತಗೊಂಡವು ಹೀಗೆ ಪುರಾತನ ಕಾಲದಿಂದಲೂ ಬೇಡರಿಗೆ ಚಾರಿತ್ರಿಕ ಮಹತ್ವವಿದೆ. ಭಾರತದಲ್ಲಿ ಇವರನ್ನು ಕಿರಾತ, ಶಬರ, ವಾಧ್ಯ, ಪುಲಿಂದ, ಬಿಲ್,ಕೋಳಿ,ನಿಷಾದ, ನಾಯಕ, ವಾಲ್ಮೀಕಿ, ಇತರ ಹೆಸರುಗಳಿಂದ ಕರೆಯುತ್ತಾರೆ. ಮಾನವ ಜನಾಂಗಗಳಲ್ಲಿ ಇವರು ಪ್ರೂಟೂಅಸ್ಟ್ರಾಲಾಯಿಡ್‌ಗೆ ಸೇರಿದವರು. ಭಾರತದಲ್ಲಿ ದ್ರಾವಿಡ ಸಂಸ್ಕೃತಿಯ ಲಕ್ಷಣಗಳನ್ನು ಹೊಂದಿರುವ ಬೇಡರು ಆರ್ಯ ಸಂಸ್ಕೃತಿಯ ಪ್ರಭಾವಕ್ಕೆ ಸಿಲುಕಿದ್ದಾರೆ. ಉತ್ತರ ಭಾರತದಲ್ಲಿನ ಬೇಡರು ಮಂಗೋಲಿಯನ್ ಬುಡಕಟ್ಟಿಗೆ ಸೇರಿರುತ್ತಾರೆ. ವಿವಿಧತೆಯಲ್ಲಿ ಏಕತೆ ಕಾಣುವ ವಿಶಿಷ್ಟತೆ ಭಾರತದಲ್ಲಿ ಇದೆ. ಇಂತಹ ವೈಶಿಷ್ಟಗಳ ಪೈಕಿ ಭೌಗೋಳಿಕ ಜನಾಂಗಿಕ ಸಂಗತಿಗಳು ಪ್ರಮುಖವಾದವು ಯಾವುದೇ ಪ್ರದೇಶ ದೇಶ ಹಳ್ಳಿ ಹೀಗೆ ಭೌಗೋಳಿಕ ಪ್ರದೇಶದಲ್ಲಿ ಸ್ಥಳಿಯರಿಗಿಂತ ಹೊರಗಿನವರೇ ಬುದ್ಧಿವಂತಿಕೆಯಿಂದ ದಬ್ಬಾಳಿಕೆ ನಡೆಸಿರುವುದು ಇತಿಹಾಸ. ಇದನ್ನು ಪ್ರಾಯೋಗಿಕವಾಗಿಯೂ ಇಂದು ಹೋಲಿಸಿ ನೋಡಬಹುದು. ಸಮಾನರಾದವರೊಡನೆ ಒಂದು ದೇಶ ಜನಾಂಗ ಧರ್ಮಕ್ಕಿಂತ ಹೊರಗಿನ ಶಕ್ತಿ ಆಳ್ವಿಕೆ ನಡೆಸಿದ್ದೇ ಹೆಚ್ಚು ಇದಕ್ಕೆ ಉದಾಹರಣೆ ಆರ್ಯರು, ಹೂಣರು, ಪರ್ಷಿಯನ್, ಸಿಪಿಯನ್ನರ, ಪೋರ್ಚಿಸರು, ಫ್ರೆಂಚರು, ಇಂಗ್ಲೀಷರು ಮತ್ತು ಡಚ್ಚರನ್ನು ಹೆಸರಿಸಬಹುದು. ಇವರು ತನ್ನ ದೇಶವಲ್ಲದೇ ಅನ್ಯದೇಶಗಳಿಲ್ಲಿ ಸಂಚರಿಸಿ ವ್ಯಾಪಾರ ರಾಜ್ಯಾಳ್ವಿಕೆ ನಡೆಸಿದ್ದು ಗಮನಾರ್ಹ. ಇಂತಹ ಪರಕೀಯರನ್ನು ಆದಿಯಲ್ಲಿ ಸಪ್ತಸಿಂಧು, ಗಂಗಾನದಿಯ ಬಯಲಿನಲ್ಲಿ ಎದುರಿಸಿದವರು ಕಿರಾತರು. ಭಾರತೀಯ ಚರಿತ್ರೆ ಮತ್ತು ಸಂಸ್ಕೃತಿಯ ಹಿನ್ನಲೆಯಲ್ಲಿ ಆದಿವಾಸಿ ಗಿರಿಜನರಾದ ಕಿರಾತರು ಅಥವಾ ವಾಧ್ಯರ ಚರಿತ್ರೆ ರೋಮಾಂಚನವಾಗಿದೆ. ರಾಹುಲ ಸಾಂಕೃತ್ಯಾಯನವರು ಸಂಗತಿಯನ್ನು ದಿವೋದಾಸ ವೋಲ್ಗಾ ಗಂಗಾ ಮತ್ತು ಜಯಾಯೌದೇಯ ಕೃತಿಗಳಲ್ಲಿ ಈ ಸಂಗತಿಯನ್ನು ಚರ್ಚಿಸುತ್ತಾರೆ. ಕಿರಾತರು ಶಭರರು, ಆರ್ಯರೊಡನೆ ಯುದ್ಧಮಾಡಿ ಗೆದ್ದ ಉದಾರಣೆಗಳಿವೆ. ಕಿರಾತರ ಗೆರಿಲ್ಲಾ ಯುದ್ಧಕ್ಕೆ ಆರ್ಯ ಪಡೆಗಳು ತತ್ತರಿಸಿ ಹೋಗಿದ್ದವಂತೆ ಈ

ಹಿನ್ನಲೆಯಲ್ಲಿ ಆರ್ಯರನ್ನು ಎದುರಿಸಿದವರಲ್ಲಿ ಕಿರಾತರು ಪ್ರಮುಖರು. ನಿಷಾಧ ಮತ್ತು ಕಿರಾತ ದಾಸದಸ್ಯು ಮೊದಲಾದವರು ಆರ್ಯ ಮಂಗೋಲಾಯ್ಡ್, ಅಸ್ಟ್ರಿಚ್ ದ್ರಾವಿಡ ಮತ್ತು ಇಂಡೋಆರ್ಯನ್ ಅಥವಾ ಇಂಡೋಯೋರಪಿಯನ್ನಗಳ ವರ್ಣ ಸಂಕರದ ಪರಿಣಾಮ ಭಾರತೀಯ ಮಾನವನಾಗಿ ವಿಕಾಶ ಹೊಂದಿದ್ದಾರೆ. ಆರ್ಯ ಮತ್ತು ದ್ರಾವಡ ಜನಾಂಗಗಳ ಮೂಲ ಮತ್ತು ಪ್ರಾಚೀನತೆ ಬಗ್ಗೆ ಇನ್ನೂ ಚರ್ಚೆಗಳು, ವಿವಾದಗಳು ನಡೆಯುತ್ತಿವೆ. ಭಾರತೀಯ ಜನಾಂಗಶಾಸ್ತ್ರದಲ್ಲಿ ಆದಿಔಷ್ಟ್ರೇಯ(ಪ್ರೊಟೊಆಸ್ಟ್ರಾಲಾಯ್ಡ್) ಭಾರತದ ಮೂಲನಿವಾಸಿಗಳನ್ನು ವ್ಯಾಧಿಯ ಅಥವಾ ಔಷ್ಟ್ರೇಯ ಎಂದು ಬಳಸಿದ್ದಾರೆ. ಈ ಬಗ್ಗೆ ಇನ್ನೂ ಖಚಿತವಾಗಿ ಹೇಳಬೇಕೆಂದರೆ ಆದಿಔಷ್ಟ್ರೇಯ ಔಷ್ಟ್ರೇಯರಿಗಿಂತ ಮೊದಲು ವಾಸವಾಗಿದ್ದ ಜನ ಎಂದಾಗುತ್ತದೆ.

ಮಾನವ ಬುಡಕಟ್ಟಿನ ಬಗ್ಗೆ ಜನಾಂಗದ ಬಗ್ಗೆ ಸಿದ್ಧಾಂತ ಮಂಡಿಸುತ್ತೆದೆ. ಈ ಬಗ್ಗೆ ಹರಪ್ಪಾ ಮೆಹೆಂಜದಾರೋ ಮಸ್ಕಿ ತಕ್ಷಶಿಲಾ, ಚಂಗಲ್‌ಪೇಟೆ ಇತರ ನಿವೇಶನಗಳ ಉತ್ಕನನದಲ್ಲಿ ದೊರೆತ ಅವಶೇಷಗಳೇ ಸಾಕ್ಷಿ. ಇವು ಭಾರತದಲ್ಲಿ ವಿವಿಧ ಜನಾಂಗ ಪಂಗಡಗಳಿದ್ದ ಬಗ್ಗೆ ಬೆಳಕು ಚಲ್ಲುತ್ತದೆ. ಆರ್ಯರಿಗಿಂತಲೂ ಪೂರ್ವದಲ್ಲಿ ವ್ಯಾಧಿಯ (ಬೇಡ) ಜನಾಂಗದಿಂದ ದ್ರಾವಿಡ ಮಾದರಿಯ ಜನಾಂಗ ಭಾರತದಲ್ಲಿ ಇತ್ತೆಂಬುದು ನಿರ್ವಿವಾದ. ಗಿರಿನಿವಾಸಿಗಳಾದ ವ್ಯಾಧೀಯರು ಬಯಲು ಪ್ರದೇಶಗಳಿಗೆ ಬಂದ ಮೇಲೆ ಅವರು ಯಾವ ರೀತಿ ಪರಿರ್ವನೆ ಹೊಂದಿದರು ಎಂಬುದನ್ನು ಎಚ್ಚರಿಕೆಯಿಂದ ಎಂದೂ ಗಮಿನಿಸಿಲ್ಲ. ಅನೇಕ ಗಿರಿಜನರಾದರು ಮೈದಾನ ಪ್ರದೇಶಗಳಿಗೆ ಕಾಲಕ್ರಮದಲ್ಲಿ ಇಳಿದು ಬಂದು ನೆಲೆಸಿದ್ದಾರೆ. ಉತ್ತರಭಾರತ ರಾಜಮಹಲ್, ಬಿಹಾರಗಳಲ್ಲಿ ಮುಂಡ ಸಂತಾಲ ಗಿರಿಜನರು ಇದ್ದರು. ದ್ರಾವಿಡ ಲಕ್ಷಣಗಳನ್ನು ಅನೇಕ ಗಿರಿಜನರು ಹೊಂದಿದ್ದರು. ವ್ಯಾಧಿಯರಂತೆ ಮಾಲೆ ಸಂತಾಲರ ವಲಸೆಗಾರಿಕೆ ಹೊಂದಿದರು. ಉಸ್ಮಾನ್‌ಇಲ್ ಎಂಬುವರ ಪ್ರಕಾರ ವ್ಯಾಧ ಶಿರೋರೂಪವು ಶೇಕಡಾ ೩೩ರಷ್ಟು ಲಂಭ ಶಿರೋಲಕ್ಷಣವನ್ನು ತೋರಿಸಿದ್ದಾರೆ. ಮೆಹಂಜೋದಾರೊವಿನಲ್ಲಿ ಅತಿಲಂಭ ಶಿರೋಲಕ್ಷಣ ತಲೆ ಬುರುಡೆಗಳು ವ್ಯಾಧಿಯ ಲಕ್ಷಣಗಳೇ ಆಗಿವೆ. ಭಾರತದ ನಿವಾಸಿಗಳು ಎಲ್ಲರೂ ಮೂಲದಲ್ಲಿ ವ್ಯಾಧ ಜನಾಂಗವಾಗಿದ್ದು ಕ್ರಮೇಣ ವಿವಿಧ ದರ್ಜೆಗಳನ್ನು ತೋರಪಡಿಸಿಕೊಂಡಿದ್ದಾರೆ. ಇವರು ಸಿಂಹಳದ ವ್ಯಾಧದಂತೆ ಮೂಲ ಲಕ್ಷಣಗಳನ್ನು ಹೋಲುತ್ತಾರೆ. ವ್ಯಾಧ ಜನಾಂಗವು ಒಂದಾನೊಂದು ಕಾಲದಲ್ಲಿ ಈ ದೇಶದಲ್ಲಿ ವಿಶಾಲ ವ್ಯಾಪ್ತಿಯಾಗಿದ್ದು ತನ್ನ ವಲಸೆ ಹೋಗುವ ಕಾಲಗತಿಯಿಂದ ಪ್ರಾಯಶಹ ಅಲ್ಲಿಂದ ಹೋರಟು ಹೋಯಿತೆಂಬುದನ್ನು ತೋರಿಸುತ್ತದೆ. ಭಾರತದ ಹೊರಗೂ ವ್ಯಾಧ ಜನಾಂಗದ ಪುಟ್ಟ ಪ್ರದೇಶಗಳಿವೆ ಎಂದು ಹೇಳಲಾಗುತ್ತದೆ. ದಕ್ಷಿಣ ಅರೇಬಿಯಾದ 'ಹಧ್ಮತ್' ಎಂಬಲ್ಲಿ ವ್ಯಾಧಜನಾಂಗದ "ಕೂನ್" ಎಂಬ ಪ್ರದೇಶವಿದೆ. ಅಪಘಾನಿಸ್ತಾನದ ಹೆಲ್‌ಮಾಂಡ್ ನದಿಯ ಇಕ್ಕೆಲಗಳಲ್ಲಿ ಆಸ್ಟೇಲಿಯಾ ಮೂಲ ನಿವಾಸಿಗಳಲ್ಲಿ ಮೂರ್ರೇಯಿಯನ್ ಪ್ರಭೇಧ ಸೇರಿದ ಬೆಸ್ತಜನಾಂಗವಿದ್ದ ಉಲ್ಲೇಖಗಳು ಇವೆ. (ಆಶೋಕನ ಕಂದಹಾರ ಶಾಸನ ಸಹ ಇದನ್ನು ತಿಳಿಸುತ್ತದೆ.)

ಈಗಾಗಲೆ ಭಾರತದಲ್ಲಿ ಗುಹೆ ಗಿರಿಗಳಲ್ಲಿ ವಾಸಮಾಡುವ ವ್ಯಾಧ ಜನರನ್ನು ಗಿರಿಜನರು ಎಂದು ಕರೆದಿದ್ದಾರೆ. ವ್ಯಾಧರ ಧೈಹಿಕ ಲಕ್ಷಣಗಳಲ್ಲಿ ಸ್ವಲ್ಪ ಮಟ್ಟಿಗೆ ಭಿನ್ನತೆಗಳಿವೆ. ಎಡ್ಗರ್ ಥರ್‍ಸ್ಟನ್‌ರೂ ವನ್ಯಕಣಿಕರ್ ಮತ್ತು ಗ್ರಾಮವಾಸಿ ಕಣಿಕರಲ್ಲಿ ಇಂತಹ ವ್ಯತ್ಯಾಸವನ್ನು ಗುರುತಿಸಿದ್ದಾರೆ. ಈ ಹಿಂದೆ ತಿಳಿಸಿರುವಂತೆ ವ್ಯಾಧರು ಮೊಟ್ಟಮೊದಲ ಘರ್ಷಣೆ ಆರ್ಯ ದಾಳಿಕಾರರೊಡನೆ ಆರ್ಯ. ಭಾಷೆಯನ್ನು ಅವರ ಮೇಲೆ ಹೇರಿದರು. ಈ ಆಕ್ರಮಣಕಾರಿ ಆರ್ಯರ ಮೂಲ ಜನಾಂಗದ ಲಕ್ಷಣಗಳು ಸ್ವಲ್ಪ ಮಾತ್ರವು ನಮಗಿಂದು ದೊರಕುವುದಿಲ್ಲ ಆದರೆ ಪರಸ್ಪರ ಸಂಪರ್ಕದಿಂದ ವ್ಯಾಧರು ಮತ್ತು ಭಾರತೀಯ ಆರ್ಯರು ಬಹಳ ರೂಪಾಂತರ ಹೊಂದಿದಂತೆ ತೋರುತ್ತದೆ. ತೋಡರಿಗೆ ೭ಳರ ಹತ್ತಿರ ಶೃಂಗವೆಂದು ಕಂಡುಬರುವುದು. ಇವರು ಉತ್ತರ ಭಾರತದ ಮೂಲನಿವಾಸಿಗಳು ಮತ್ತಷ್ಟು ಹೆಚ್ಚಾಗಿ ಸಮರ್ಥಿಸುತ್ತದೆ. ಇಲ್ಲೂ ಕೂಡ ೭ಳರ ಹತ್ತಿರದ ಶೃಂಗವು ೭೨ರ ಹತ್ತಿರದ ಶೃಂಗವು ೭೨ರ ಹತ್ತಿರ ಭಾರತೀಯ ಆರ್ಯ ಶೃಂಗದ ವೈವಿಧ್ಯವೆಂದು ತೊರುತ್ತದೆ. ಅತಿ ಕುಬ್ಜತನ ವ್ಯಾಧ ಲಕ್ಷಣ ದ್ರಾವಿಡರು ಇಂತಹ ವ್ಯಾಧ ಬುಡಕಟ್ಟಿನಿಂದ ಬಂದಿದ್ದಾರೆ. ಹೀಗೆ ವ್ಯಾಧ ಜನಾಂಗದೊಡನೆ ಮಿಶ್ರಿತಗೊಂಡು ಇತರ ಸಮುದಾಯಗಳು ಉದಯವಾಗಿರಬೇಕು. ಕರ್ನಾಟಕದಲ್ಲಿ ಹಾವನೂರು ವರದಿ ಪ್ರಕಾರ ೧೭ ಪರ್ಯಾಯ ಹೆಸರುಗಳಿಂದ ಇವರು ಗುರುತಿಸಿಕೊಂಡಿದ್ದಾರೆ. ೧೯೯೧ ಡಿಸೆಂಬರ್‌ನಲ್ಲಿ ನಾಲ್ಕು (ಜಾತಿಯ ಪ್ರಭೇದ) ಹೆಸರುಗಳನ್ನು ಸಂವಿಧಾನದಲ್ಲಿ ಪುನಃ ಅಂಗೀಕರಿಸಿ ಪರಿಶಿಷ್ಟ ವರ್ಗಕ್ಕೆ ಸೇರಿಸಲಾಗಿದೆ.

ಭೇಟೆಯ ಮೂಲಕ ಬೇಡ ಎಂಬ ಜಾತಿ ನಿರ್ಮಾಣವಾಗಿದೆ. ಇಂದಿಗೂ ಬೇಟೆಗಾರರಿಗೆ ಬೇಡರೆಂದೆ ಕರೆಯುವರು. ಬೇಡರು ಯಾವುದಕ್ಕೂ ಅಂಜದವರು ಭೇಟೆ ಪಶುಪಾಲನೆ ಮತ್ತು ಕೃಷಿಚಟುವಟಿಕೆಗಳಲ್ಲಿ ನಿಪುಣರಾಗಿದ್ದರು. ಹೀಗೆ ರಾಜಪ್ರಭುತ್ವದ ಪದವಿಗಳ ವರೆಗೂ ಇವರು ಅರ್ಹರಾಗಿದ್ದರು. ಬಿಲ್ಲು ಬಾಣ ಹಿಡಿದು ಭೇಟೆಯಾಡುವುದಷ್ಟೇ ಅಲ್ಲ. ಸೈನಿಕರಾಗಿ, ನಾಯಕರಾಗಿ, ತಳವಾರರಾಗಿ ಕೆಲಸ ನಿರ್ವಹಿಸಿದ್ದಾರೆ. ಕ್ಷತ್ರಿಯರು ವೀರ ಯೋಧ ಜಾಂಗದವರಾದ ಭೇಡರು ಹಿಂದೂ ಧರ್ಮದ ಚೌಕಟ್ಟಿನಲ್ಲಿಯೇ ಪ್ರತ್ಯೇಕ ಧರ್ಮವನ್ನು ಸೃಷ್ಟಿಸಿಕೊಂಡಿರುವರು.

ದಕ್ಷಿಣ ಭಾರತದ ಬೇಡರು ಬೇಟೆಗಾರರಾಗಿ ಕಂಡುಬರುತ್ತಾರೆ. ನಾಯಕತನ ಶೂರ ಸ್ವಾಭಿಮಾನಗಳಿಂದ ಕೂಡಿರುವ ಇವರನ್ನು ಕರ್ನಾಟಕದ ರಜಪೂತರೆಂದು ಕರೆಯುವರು. ಮಲೆಪರೆಂದು, ಗಿರಿಜನರೆಂದು, ಬೇಡರ ಪಡೆಗಳು ಎಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಕರ್ನಾಟಕದ ಮಟ್ಟಿಗೆ ಬೇಡರನ್ನು ಉಲ್ಲೇಖಿಸುವ ಮೊದಲ ಶಾಸನ ಗದ್ದೆಮನೆ ಶಾಸನ. ಕ್ರಿ.ಶ. ಏಳನೆ ಶತಮಾನದಲ್ಲಿ ಬೇಡೆರ ಪ್ರತ್ಯೇಕ ರಾಜ್ಯಗಳೂ ಇದ್ದವು ಎಂದು ತಿಳಿದರು ಬರುತ್ತದೆ. ಪ್ರಾಂಚಿಸ್‌ಬುಕಾನನ್ ಎಂಬ ವಿದೇಶಿ ವಿದ್ವಾಂಸ ಕದಂಬರೂ ಕೂಡ ಬೇಡರು ಎಂದು ವಿವರಿಸಿದ್ದಾನೆ. ಬೇಡರನ್ನು ಉಲ್ಲೇಖಿಸುವ ಶಾಸನಗಳು ಇರುವುದು ಹೆಚ್ಚಾಗಿ ಮಲೆನಾಡಿನಲ್ಲಿ ನಾನಾ ಬಗೆಯಾಗಿ ಹೋರಾಡಿ ಮಡಿದ ಸಾಹಸಗಾಥೆಗಳನ್ನು ಇವು ಉತ್ತರಿಸತ್ತವೆ. ಶಾತವಾಹನರ ಕಾಲಕ್ಕೆ ತಳವಾರ ಎಂದು ಕರೆಸಿಕೊಂಡು ಹುದ್ದೆಯಲ್ಲಿ ಇದ್ದ

ಬೇಡರು ರಾಷ್ಟ್ರಕೂಟರ ಕಾಲಕ್ಕೆ 'ನಾಯಕ' ಪದವಿಗೆ ಬಡ್ತಿ ಪಡೆದಂತೆ ಆಯಿತು. ವಿಜಯನಗರ ಪೂರ್ವದಲ್ಲಿಯೇ ಮಹಾನಾಯಕಚಾರ್ಯ ಬಿರುದುಗಳನ್ನು ಗಳಿಸಿದ್ದರು. ಬೇಡರು ಮೂಲತಃ ಬೇಟೆ ಮತ್ತು ಪಶುಪಾಲನಾ ವೃತ್ತಿಗಳಿಗೆ ಸೇರಿದವರು ಎಂಬುದಕ್ಕೆ ಇವರ ಮಹಿಳೆಯರು ಸಹ ಭೇಟೆ ಜೊತೆ ವಿವಿಧ ವೃತ್ತಿಗಳಲ್ಲಿ ತೊಡಗಿಕೊಂಡದ್ದು ಗಮನಾರ್ಹ. ಪಶುಪಾಲನೆಯಲ್ಲಿ ತೊಡಗಿದ ಬಗ್ಗೆ ಕ್ರಿ.ಶ.೯೭೭ರ ಶಾಸನ ಬೆಳಕು ಚೆಲ್ಲುತ್ತದೆ. ಬೇಡರು ಯುದ್ಧದಲ್ಲಿ ತಂದುಕೊಟ್ಟ ಜಯಕ್ಕಾಗಿ ದಾನದತ್ತಿಗಳನ್ನು ಪಡೆದಿರುವುದು ಹೆಮ್ಮೆಯ ಸಂಗತಿ. ಹೀಗೆ ಉನ್ನತ ಹುದ್ದೆಗಳಿಗೆ ಅಲಂಕರಿಸುವಲ್ಲಿ ಸ್ಪರ್ಧೆ ಅಗತ್ಯವೂ ಅನಿವಾರ್ಯವೂ ಆಗಿತ್ತು.

ಕ್ರಿ.ಶ.೧೧೧೭ರಲ್ಲಿ ಹೊಯ್ಸಳರ ವಿಷ್ಣುವರ್ಧನ ಬಿಟ್ಟಿದೇವನು ಕಿರಾತ ಮುಖ್ಯಸ್ಥರನ್ನು ಶಕ್ತಿಶಾಲಿ ವೀರರನ್ನು ತನ್ನ ಸಹಾಯಕ್ಕೆ ನೇಮಿಸಿಕೊಂಡಿದ್ದ. ಇದೇ ಸಂದಂರ್ಭದಲ್ಲಿ ಹೊಯ್ಸಳರಿಗೂ ಮತ್ತು ಸೇವುಣರಿಗೂ ಯುದ್ದ ನಡೆದಾಗ ಬೇಡ ಸೈನಿಕರ ಶ್ರಮ ಹೊಯ್ಸಳರ ಪರವಾಗಿದಿದ್ದು ನಿರ್ಣಾಯಕ ಅಂಶ. ವಿಷ್ಣುವರ್ಧನನ ನೆಚ್ಚಿನವನಾದ ಭೇಟೆಯ ತಿಪ್ಪೆಯನಾಯಕನಿಗೆ ಸೋವೆ ನಾಯಕಿ ಮಾಚೇಯಿ ನಾಯಕಿ ಹೆಂಡಿತಿಯರು ಇದ್ದರು. ಅಂದು ವೃತ್ತಿಗಳಲ್ಲಿ ರಾಜ ಪ್ರಭುತ್ವಗಳಲ್ಲಿ ಹೊಂದಾಣಿ ಇದ್ದು ವಿವಾಹಗಳ ಸಾಮಾನ್ಯವಾದ ನಿರ್ಧಾರದೊಂದಿಗೆ ನಡೆಯುತ್ತಿದ್ದವು.

ವಿಜಯನಗರ ಕಾಲದಲ್ಲಿ ಮುಕ್ಕಾಲುಭಾಗ ಸೈನಿಕರು, ಪ್ರಜೆಗಳೂ, ಸೇವಕರು, ಬೇಡರೇ ಆಗಿದ್ದರು ಎಂಬ ಹೆಗ್ಗಳಿಕೆಯ ಮಾತು ಸುಳ್ಳಲ್ಲ. ಇವರಿಗೂ ಪೂರ್ವದಲ್ಲಿ ಕಮ್ಮಟದುರ್ಗ ಮುಮ್ಮಡಿ ಸಿಂಗೇನಾಯಕ, ಕಂಪಿಲರಾಯ, ಕುಮಾರರಾಮರು, ಪೂವಾಲಿ ಬೆಡಗಿನ ನಾಯಕ ವಂಶಸ್ಥರಾಗಿದ್ದರು. ಕುಮಾರರಾಮನ ತಾಯಿ ಹರಿಯಾಲದೇವಿ ಗುಜ್ಜಲ ವಂಶದವಳು. ಚಿಕ್ಕರಾಜ್ಯವಾದರೂ ಕುಮ್ಮಟ ದುರ್ಗ ಇತಿಹಾಸದಲ್ಲಿ ಅಗ್ರ ಸ್ಥಾನ ಪಡೆದಿದೆ. ಇವರ ಭಾವನಾದ ಸಂಗಮನ ಮಕ್ಕಳೆ ಹರಿಯರ ಬುಕ್ಕ. ಇವರು ವಿಜಯನಗರ ಸಾಮ್ರಾಜ್ಯಕ್ಕೆ ಅಡಿಗಲ್ಲು ಹಾಕಿದರು. ಪ್ರಸಿದ್ದ ಇತಿಹಾಸಕಾರರಾದ ಡಾ. ವಿ ಎಸ್ ಸ್ಮಿತ್ ಮತ್ತು ಪಂಡಿತ ರಾಮಾಕೃಷ್ಣಶಾಸ್ತ್ರೀ ಮೊದಲಾದವರು ಅಭಿಪ್ರಾಯ ಪಡುವಂತೆ ಹಕ್ಕಬುಕ್ಕರು ಪ್ರತಾಪರುದ್ರನ ಸೇನೆಯಲ್ಲಿ ಇದ್ದರು. ಅವನು ಪರಾಭವಗೊಂಡಾಗ ಕಂಪಿಲಿಗೆ ಹೋಗಿ ಸೇರಿಕೊಂಡರೆಂದೂ ಕಂಪಿಲರಾಯ ಬೇಡರ ಜಾತಿಗೆ ಸೇರಿದವನು ಎಂದೂ ಅದ್ದರಿಂದ ಹಕ್ಕಬುಕ್ಕರು ಕೂಡ ಕಂಪಿಲರಾಯನ ಜಾತಿಯವರೇ ಆಗಿದ್ದರೆಂಬ ಸಂಗತಿ ಗಮನಾರ್ಹವಾದದ್ದು. ಈಗಾಗಿ ವಿಜಯನಗರದ ಸ್ಥಾಪನೆಗೆ ಬೇಡರೆ ಕಾರಣರಾದುದ್ದನ್ನು ಅಲ್ಲಗಳೆಯುವಂತಿಲ್ಲ. ವಿಜಯನಗರ ಸೈನ್ಯದಲ್ಲಿ ಬಹುಸಂಖ್ಯ ಬೇಡರ ಕಾಲಾಳು ಪಡೆಯಿತ್ತು. ಅಮರನಾಯಕರೆಂದು ಅನೇಕ ಪ್ರಯೋಜನಗಳನ್ನು ಇವರು ಪಡೆದುಕೊಂಡರು. ವಿಜಯನಗರದ ಅರಸರು ಮುಸಲ್ಮಾನರ ವಿರುದ್ದ ಹೊರಾಡಲು ಬೇಡಪಡೆಯವರನ್ನು ಆಶ್ರಯಿಸಿದ್ದರು. ಬಿ ಎಲ್ ರೈಸ್‌ರವರು ತಮ್ಮ ಗ್ಯಾಸೆಟಿಯರ್‌ನಲ್ಲಿ ತಿಳಿಸಿರುವಂತೆ ತಾಳಿಕೋಟೆ ಯುದ್ದದಲ್ಲಿ ಬೇಡ ಜನಾಂಗದ ಎಪ್ಪತ್ತೆರಡು ಸಂಸ್ಥಾನದ ನಾಯಕರು ಶಕ್ತಿ ಸಾಹಸ ತೋರಿಸಿ ಕಷ್ಟಕ್ಕೆ ಇಡಾದುದು ಚರಿತ್ರೆಯ ಪುಟಗಳಲ್ಲಿ ರಾರಾಜಿಸುತ್ತದೆ. ರಕ್ಕಸಗಿತಂಗಡಗಿ

ಯುದ್ಧ ೧೫೬೫ ಜನವರಿ ೨೩ರಂದು ನಡೆದಾಗ ಸುಮಾರು ನಲವತ್ತು ಸಾವಿರ ಬೇಡರ ಪಡೆ ಹತವಾಯಿತೆಂದು ವಿದೇಶಿ ಪ್ರವಾಸಿ ಪಿರಿಸ್ತಾ ಹೆಳಿದ್ದಾನೆ. ಈ ಸಂಗತಿಯನ್ನು ಬಳ್ಳಾರಿ ಜಿಲ್ಲೆಯ ಹಿರಿಯ ತಲೆಮಾರಿನ ಬೇಡನಾಯಕ ವೃತ್ತಿಯವರು ನಿಜವೆಂದು ಒಪ್ಪುತ್ತಾರೆ. ಆದ್ದರಿಂದಲೇ ನಮ್ಮ ಹೆಣ್ಣುಮಕ್ಕಳು ಗಂಡನಿಲ್ಲದ್ದರಿಂದ ದೇವದಾಸಿಯರು ಆದರೆಂದು ಮರುಕ ಪಡುತ್ತಾರೆ. ಬೇಡರು ತೋರಿದ ಸಹಾಯ ದಂಡನಾಯಕತ್ವಗಳಿಗೆ ವಿಜಯನಗರದ ಅರಸ ಸದಾಶಿವರಾಯ ೧೫೬೮ರಲ್ಲಿ ಬೇಡರಿಗೆ ಸ್ವಾಯತ್ತತೆಯನ್ನು ದಯಪಾಲಿಸಿದ್ದು ಸ್ಮರಣೀಯ. ಅದೇ ವರ್ಷ ರಾಮರಾಯನ ತಮ್ಮನು ಪ್ರಸಿದ್ಧ ರಿಜೆಂಟನು ಆಗಿದ್ದ ತಿರುಮಲರಾಯ ರಕ್ಕಸಗಿತಂಡಗಿಯಲ್ಲಿ ಬೇಡರನ್ನು ತೊಡಗಿಸಿಕೊಂಡಿದ್ದಕ್ಕೆ ಬೇಡರ ಮುಖ್ಯಸ್ಥ ಕಾಮಗೇತಿ ಮದಕರಿನಾಯಕನಿಗೆ ಚಿತ್ರದುರ್ಗ, ಹೊಳಲ್ಕೆರೆ, ಇತರೆ ಸ್ಥಳಗಳನ್ನು ಅಮರ ಮಾಗಣಿಯಾಗಿ ಬಿಟ್ಟುಕೊಟ್ಟ.

ವಿಜಯನಗರದಲ್ಲಿ ಸೈನಿಕರಾಗಿ, ದಂಡು ಹೋದ ಸ್ಥಳಗಳಲ್ಲಿ ವಸತಿ ಹೂಡುತ್ತಾ ತಂಗಿರುತ್ತಿದ್ದ ಸ್ಥಳಗಳಲ್ಲಿ ನಾಯಕರು, ಸೈನಿಕರು, ಕ್ರಮೇಣ ಪಾಳೆಗಾರರು ಆದರೂ ೧೫-೧೬ನೇ ಶತಮಾನದಲ್ಲಿ ಇವರು ಏಳಿಗೆಯಾದರೂ, ೧೨ನೇ ಶತಮಾನದ ಶಾಸನಗಳಲ್ಲಿ ಪಾಳೆಗಾರ ಪದದ ಉಲ್ಲೇಖವಿದೆ. ಪಾಳೆಗಾರರು ಆ ಕಾಲಕ್ಕೆ ರಾಜಪ್ರಭುತ್ವ ಪಡೆದ ಕೆಳದರ್ಜೆಯ ಜನರು. ಸರಿಯಾದ ಸ್ಥಾನಮಾನ ಸಿಗದ ಪರಾಕ್ರಮಿಗಳೂ ಹೋರಾಟದ ಮೂಲಕ ಪ್ರಭುತ್ವ ಪಡೆದರು. ಇವರಿಗೆ ಇಂದು ನೀಚಾರ್ಥವಾಗಿ ಕರೆಯುತ್ತಿರುವುದು ವಿಪರ್ಯಾಸ. ಬೇಡರೇ ಮೊದಲ ಪಾಳೆಗಾರರು ಆದರೂ ಅನಂತರದಲ್ಲಿ ಇತರೆ ಜನಾಂಗದವರು ಈ ರೀತಿ ಪ್ರಭುತ್ವ ಹೊಂದಿದರು. ಇಂತಹ ಪಾಳೆಗಾರಿಕೆಯಿಂದ ಅತಿ ದೂರದಲ್ಲಿ ಇದ್ದವರು ಮ್ಯಾಸ ಬೇಡರು ಇವರಿಗೆ ರಾಜ ಪ್ರಭುತ್ವಕ್ಕಿಂತ ತಮ್ಮ ಸಂಸ್ಕೃತಿ, ಸಂಪ್ರದಾಯ, ನಾಗರೀಕತೆ, ಹೆಚ್ಚು ಮಹತ್ವವಾಗಿ ಕಾಣಿಸಿತು. ಸಾಂಸ್ಕೃತಿಕ ರಾಜ ಪ್ರಭುತ್ವವನ್ನು ನಾಯಕನ ಹಟ್ಟಿಯಲ್ಲಿ ಸ್ಥಾಪಿಸಿದರು. ನಾಯಕನ ಹಟ್ಟಿ ಸಮೀಪದ ಹೊಸಗುಡ್ಡ (ರಾಮದುರ್ಗ) ಈ ಹಿನ್ನಲೆಯಲಿ ಮಹತ್ವವಾದದು.

ನಾಗರಿಕತೆಯೊಂದಿಗೆ ರಾಜಕೀಯ ನಿಪುಣತೆ ಪಡೆದ ಬೇಡರು ಅಲ್ಲಲ್ಲಿ ಪಾಳೆಯ ಪಟ್ಟುಗಳನ್ನು ಸ್ಥಾಪಿಸಿಕೊಂಡರು. ಅವುಗಳೆಂದರೆ ಚಿತ್ರದುರ್ಗ, ಗುಡೆಕೋಟೆ, ಜರಿಮಲೆ, ರಾಯದುರ್ಗ, ಮೊಳಕಾಲ್ಮೂರು, ರತ್ನಗಿರಿ, ನಿಡಗಲು, ಶಿರಾ, ಬಳ್ಳಾರಿ, ಪೆನುಗೊಂಡ, ಮದಗ ಮಸೂರು, ಇಕ್ಕೇರಿ, ಸ್ವಾಧಿ, ಚಂದಾವರ, ಹರ್ತಿಕೋಟೆ, ಹಾಗಲವಾಡಿ, ವಾಗಿನಗೇರ, ಸುರಪುರ, ಬಿದನೂರು, ಮುಂಡಿಕೋಟೆ, ಮಟ್ಟಿ, ಕಡಪೆ, ತಳಕೇರಿ, ಬೆಳಗುತ್ತಿ, ಕುಮ್ಮಟದುರ್ಗ, ಆನೆಗುಂದಿ, ಮಂಗಳೂರು, ಬಸವಾಪಟ್ಟಣ, ಬೇಲೂರು, ಬಾಣಾವರ, ಚಿಕ್ಕನಾಯಕನಹಳ್ಳಿ, ಕೊಲ್ಲಾಪುರ, ಬಂಕಾಪುರ, ನಂದಿಹಾಳ, ದಾವನಹಳ್ಳಿ, ಗುತ್ತಿ, ಚನ್ನಪಟ್ಟಣ, ಕನಕಗಿರಿ, ಲೇಪಾಕ್ಷಿ, ಚಂದ್ರಗಿರಿ, ತಲಕಾಡು, ಕರ್ಜಗಿ, ಉಚ್ಚಂಗಿದುರ್ಗ, ಮತ್ತೋಡು, ಮೊದಲಾದವುಗಳನ್ನು ಹೆಸರಿಸಬಹುದು.

ಹೀಗೆ ಕರ್ನಾಟಕದ ವಿವಿಧ ಭಾಗಗಳಲ್ಲಿ ಬೇಡರ ಬದುಕು ಸುಧಾರಣೆಯ ಹಂತದಲ್ಲಿ ಇದ್ದು ಇನ್ನೂ ಕೆಲವು ಕಡೆ ಹೀನಾಯಗೊಂಡಿರುವುದು ಉಂಟು ಇವೆರಡರ ಪೈಕಿ ತೀರಾ ಹಿಂದುಳಿಯದೇ

ಅಷ್ಟೇನು ಮುಂದುವರೆಯದೇ ತಟಸ್ಥಗೊಳ್ಳದೇ ಇರುವುದು ಮ್ಯಾಸ ಬೇಡರ ಸಂಸ್ಕೃತಿಯ ವಿಷೇಶ. ಮೂರುನಾಲ್ಕು ಶತಮಾನಗಳಿಂದ ಬುಟಕಟ್ಟಿನ ನಂಬಿಕೆ ಆಚರಣೆ ಪದ್ದತಿಗಳನ್ನು ಯತಾವತ್ತಾಗಿ ಉಳಿಸಿಕೊಂಡು ಬಂದಿದ್ದಾರೆ. ಜಾಗತೀಕರಣ ಪ್ರಕ್ರಿಯೆಯಲ್ಲಿ

ಬೇಡರು ವಿವಿಧ ಕ್ಷೇತ್ರಗಳಲ್ಲಿ ತಮ್ಮ ಅನನ್ಯತೆಯನ್ನು ಉಳಿಸಿಕೊಳ್ಳಲು ಶ್ರಮಿಸುತ್ತಿದ್ದಾರೆ. ಮದ್ರಾಸ್ ಕರ್ನಾಟಕದ ಬಳ್ಳಾರಿ ಜಿಲ್ಲೆ ಅನೇಕ ವೈಶಿಷ್ಟ್ಯತೆಗಳನ್ನು ಗುರುತಿಸಬಹುದು."[೨]

**೨.೩. ಬುಡಕಟ್ಟು ನೆಲೆಯಲ್ಲಿ ಬೇಡರು**

"ಕರ್ನಾಟಕದಲ್ಲಿ ನಾಯಕ, ತಳವಾರ, ವಾಲ್ಮೀಕಿ, ಬೇಡ ಇವೇ ಮೊದಲಾದ ಹೆಸರುಗಳಿಂದ ಗುರುತಿಸಲ್ಪಡುವ ಬೇಡ ಸಮುದಾಯವನ್ನು ಬುಡಕಟ್ಟು ನೆಲೆಯಲ್ಲಿ ಪರಿಶೀಲಿಸುವುದು ಇಲ್ಲಿಯ ಪ್ರಧಾನ ಉದ್ದೇಶ. ಬೇಡರು ಕಾಲಗತಿಯಲ್ಲಿ ಬುಡಕಟ್ಟಿನ ಅನನ್ಯತೆಯನ್ನು ಎಷ್ಟು ಉಳಿಸಿಕೊಂಡಿದ್ದಾರೆ ಎಂದು ಗುರುತಿಸುವ ಕ್ರಮ ಒಂದೆರಡು ಅಪಾಯಗಳನ್ನು ಎದುರಿಸಬೇಕಾಗುತ್ತದೆ. ಅಂತವುಗಳಲ್ಲಿ ಒಂದು ಹೊರಗಿನಿಂದ ಬರುವಂತಹದ್ದು. ಮತ್ತೊಂದು ಒಳಗಿನಿಂದ ಬರುವಂತಹದ್ದು. ಬೇಡರು ಬುಡಕಟ್ಟು ಲಕ್ಷಣಗಳನ್ನು ಅಷ್ಟಾಗಿ ಉಳಿಸಿಕೊಂಡಿಲ್ಲ ಎಂದರೆ ಬೇಡರು ಮೀಸಲಾತಿಗೆ ಅರ್ಹರಲ್ಲ ಎನ್ನಬಹುದು. ನಾಯಕ ಅನ್ನುವ ಪದವನ್ನು ಶ್ರೇಷ್ಟವಾಗಿ ವ್ಯಾಖ್ಯಾನಿಸಿ ನಾಯಕರಿಗೆ ಮೀಸಲಾತಿ ಪಟ್ಟಿಯಿಂದ ಹೊರಗಿಡಬೇಕೆಂದು ಕೆಲವು ತಿಂಗಳುಗಳ ಹಿಂದೆ ವಾದಿಸಿದ ದಾಸನೂರು ಕೂಸಣ್ಣ ಅವರ ವಿಚಾರಗಳನ್ನು ಇಲ್ಲಿ ಸ್ಮರಿಸಬಹುದು. ಬೇಡರಲ್ಲಿ ಯಾವುದೋ ಒಂದು ಗುಂಪು ಮಾತ್ರ ಸ್ಪಷ್ಟ ಬುಡಕಟ್ಟು ಲಕ್ಷಣಗಳನ್ನು ಹೊಂದಿದೆ ಎಂದು ಹೇಳಿದರೆ ಒಳಗಿನವರು ಅಸೂಹೆ ಪರರಾಗುತ್ತಾರೆ. (ಸೋದರ ಸಮುದಾಯ ಪರಿಶಿಷ್ಟ ಜಾತಿಯಲ್ಲಿ ನಡೆಯುವ ಒಳಮೀಸಲಾತಿ ಗದ್ದಲ ಇಲ್ಲಿಯೂ ಆರಂಬವಾಗುತ್ತದೆ). ಆಗಾಗಿ ನನ್ನ ಶೋಧನೆಗೆ ಸಂವಿಧಾನಾತ್ಮಕವಾಗಿ ದತ್ತವಾಗುವ ಮೀಸಲಾತಿ ಮತ್ತಿತರ ವಿಶೇಷ ಸೌಲಭ್ಯಗಳನ್ನು ಉಳಿಸಿಕೊಳ್ಳುವ ಅಥವಾ ಬಿಡುವ ಪ್ರಶ್ನೆಯಾಗದೆ, ಇಂತಹ ಸೀಮಿತ ಪರಿಕಲ್ಪನೆಯನ್ನು ದಾಟುವ ಸಾಂಸ್ಕೃತಿಕ ಅಸ್ಮಿತೆಯ ಪ್ರಶ್ನೆ ಮುಖ್ಯವಾಗಿದೆ.

ಶೋಧನೆಗೆ ಮೊದಲು ಬುಡಕಟ್ಟು ಎಂದರೇನು? ಬುಡಕಟ್ಟಿನ ಪ್ರಧಾನ ಲಕ್ಷಣಗಳು ಯಾವುವು? ಎಂದು ಸ್ಪಷ್ಟಪಡಿಸಿಕೊಳ್ಳಬೇಕಾಗುತ್ತದೆ. ಬುಡಕಟ್ಟುಗಳ ಬಗ್ಗೆ ಅಧ್ಯಯನ ಆರಂಭಿಸಿದವರಲ್ಲಿ ಭಾರತದ ಮಟ್ಟಿಗೆ ಬ್ರಿಟೀಷರೆ ಮೊದಲೆನ್ನಬಹುದು. ಅಧಿಕಾರಿಗಳು, ಕ್ರೈಸ್ತ ಪಾದ್ರಿಗಳು ಕ್ರಮವಾಗಿ ಆಡಳಿತ ಹಾಗೂ ಧರ್ಮ ಪ್ರಚಾರಗಳಿಗೆ ಅನುಕೂಲವಾಗುವಂತೆ ಬುಡಕಟ್ಟು ಅಧ್ಯಯನ ನಡೆಸಿದ್ದಾರೆ. ಬ್ರಿಟೀಷ್ ವಿದ್ವಾಂಸರು 'ಟ್ರೈಬ್' ಎನ್ನುವ ಹೆಸರಿನಿಂದ ಗುರುತಿಸಿದ ಸಮುದಾಯಗಳನ್ನು ಸ್ವಾತಂತ್ರ ನಂತರ ಅಧ್ಯಯನ ಮಾಡಿದ ದೇಶಿ ವಿದ್ವಾಂಸರು ಗಿರಿಜನರು, ಆದಿವಾಸಿಗಳು, ಬುಡಕಟ್ಟುಗಳು ಮೊದಲಾದ ಹೆಸರುಗಳಿಂದ ಕರೆದರು. ಮೇಲಿನ ಹೆಸರುಗಳೇ ಸೂಚಿಸುವಂತೆ ಮನುಕುಲದ ಮೂಲ ಪುರುಷರು, ಗಿರಿಗಳಲ್ಲಿ ವಾಸಮಾಡುವವರು ಬುಡಕಟ್ಟು ಜನ

ಎನಿಸಿಕೊಂಡರು. ಬುಡಕಟ್ಟು ಎಂಬ ಪದದ ಅರ್ಥವೂ ಕೂಡ ಅದೇ ಆಗಿದೆ. "ಬುಡ ಅಂದರೆ ಮೂಲ, ಕಟ್ಟು ಎಂದರೆ ಸಾಂಸ್ಕೃತಿಕ ಮೌಲ್ಯಗಳ ಕಟ್ಟು ಕಟ್ಟಳೆ ಆಚರಣೆ. ಒಂದೇ ಮೂಲಕ್ಕೆ ಸೇರಿದ ಸಂಪ್ರದಾಯವನ್ನು ಪಾಲಿಸುವವರು ಬುಡಕಟ್ಟು ಜನ"

ಬುಡಕಟ್ಟು ಎನಿಸಿಕೊಳ್ಳಬೇಕಾದರೆ ಒಂದು ಸಮುದಾಯ ಹೊಂದಿರಬೇಕಾದ ಅನೇಕ ಲಕ್ಷಣಗಳನ್ನು ವಿದ್ವಾಂಸರು ಪಟ್ಟಿಮಾಡಿದ್ದಾರೆ. ಅವುಗಳನ್ನು ಮುಂದಿನಂತೆ ಪಟ್ಟಿಮಾಡಬಹುದು.

- ಪ್ರತ್ಯೇಕ ಸಂಸ್ಕೃತಿ
- ರಕ್ತ ಸಂಬಂಧದ ಅತಿಯಾದ ಅವಲಂಬನೆ
- ಅನ್ಯವನ್ನು ಅನುಮಾನದದಿಂದ ನೋಡುವ ದೃಷ್ಟಿ
- ಅತಿಯಾದ ಪಾವಿತ್ರ್ಯತೆ
- ದೈವದ ವಿಶಿಷ್ಟ ಕಲ್ಪನೆ ಹಾಗೂ ಅಪಾರ ಭಕ್ತಿ
- ಕಾಡಿಗೆ/ಪ್ರಕೃತಿಗೆ ಹತ್ತಿರವಾದ ಹಾಗೂ ಅವಲಂಬನೆಯ ಬದುಕು
- ಪ್ರತ್ಯೇಕ ಭಾಷೆ

ಈ ಎಲ್ಲಾ ಲಕ್ಷಣಗಳನ್ನು ಒಂದೇ ಸಮುದಾಯದಲ್ಲಿ ದೊರೆಯುವುದು ವಿರಳ. ಇಂದು ಶುದ್ಧ ಬುಡಕಟ್ಟುಗಳೆಂದು ಕರೆಸಿಕೊಂಡು ಸಮುದಾಯಗಳಲ್ಲಿ ಕೂಡ ಈ ಎಲ್ಲಾ ಅಂಶಗಳು ಪೂರ್ಣ ಪ್ರಮಾಣದಲ್ಲಿ ಸಿಗಲಾರವು. ಈ ಹಿನ್ನಲೆಯಲ್ಲಿ ಕರ್ನಾಟಕದ ಬೇಡ ಸಮುದಾಯದಲ್ಲಿ ದೊರೆಯುವ ಬುಡಕಟ್ಟು ಅಂಶಗಳನ್ನು ಗುರುತಿಸಬಹುದಾಗಿದೆ. ಇಲ್ಲಿಯೇ ಪ್ರಬಂಧದ ಮಿತಿಯನ್ನು ತಿಳಿಸುವುದು ಸೂಕ್ತ ಪ್ರಸ್ತುತ ಪ್ರಯತ್ನದಲ್ಲಿ ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ ಜಿಲ್ಲೆಗಳ ಮ್ಯಾಸ ಬೇಡರ/ನಾಯಕರ ಹಟ್ಟಿಗಳ ಸಂಪ್ರದಾಯ ಆಚರಣೆಗಳನ್ನು ವಿಶೇಶವಾಗಿ ಕ್ಷೇತ್ರಾಧ್ಯಯನದ ಹಿನ್ನಲೆಯಲ್ಲಿ ಗ್ರಹಿಸಲಾಗಿದೆ. ಹಾಗೆಯೇ ಆರಂಭದಿಂದ ಇಲ್ಲಿಯವರೆಗೆ ನಡೆದ ವಿದ್ವಾಂಸರ ಅಧ್ಯಯನಗಳಿಂದಲೂ ಹಲವಾರು ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ.

**ಸಾಂಸ್ಕೃತಿಕ ಅನನ್ಯತೆ**

ಪ್ರತ್ಯೇಕ ಸಂಸ್ಕೃತಿಯನ್ನು ಹೊಂದಿರುವುದು ಬುಡಕಟ್ಟು ಸಮುದಾಯಗಳ ಪ್ರಧಾನ ಲಕ್ಷಣ, ಸಮುದಾಯದೊಂದರ ಉಗಮದಿಂದ ಆರಂಭಗೊಂಡ ಸಂಸ್ಕೃತಿ ನಿಂತರವಾಗಿ ತನ್ನ ವಿಶಿಷ್ಟತೆಗಳೊಂದಿಗೆ ಮುಂದುವರೆಯುತ್ತದೆ. ಬುಡಕಟ್ಟುಗಳ ಇಂತಹ ಸಂಗತಿಗಳು ಪುರಾಣ ಆಚರಣೆ ನಂಬಿಕೆ ಸಂಪ್ರದಾಯಗಳ ಮೂಲಕ ಉಳಿದು ಬೆಳೆದಿರುತ್ತವೆ. ಈ ಹಿನ್ನಲೆಯೊಳಗೆ ಬೇಡರ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಗಮನಿಸಬಹುದಾಗಿದೆ.

**ಜನನ:**

ಬೇಡರ ಸಮುದಾಯದಲ್ಲಿ ಜನನ ಸಂಬಂದೀ ಆಚರಣೆಗಳೂ ಹಲುವು ಸಾಮಾನ್ಯ ಸಂಗತಿಗಳಾದರು ಕೆಲವು ವೈಶಿಷ್ಟ್ಯ ಪೂರ್ಣವಾಗಿವೆ. ಅಂತವುಗಳಲ್ಲಿ ಜನನದ ಬಗ್ಗೆ ಇಟ್ಟುಕೊಂಡ ಮೈಲಿಗೆ ಭಾವನೆ. ಕಾಡುಗೊಲ್ಲರಂತೆ ಬಾಣಂತಿಯನ್ನು ಪ್ರತ್ಯೇಕ ಗುಡಿಸಲಲ್ಲಿ ಇಡುವುದಿಲ್ಲ. ಆದರೂ ಹೆರಿಗೆ ಆದ ದಿನದಿಂದ ಮೂರು, ಐದು, ಏಳು, ಒಂಬತ್ತು, ಹನ್ನೊಂದು ದಿನಗಳಲ್ಲಿ 'ಮುಟ್ಟು ಹೊರಡಿಸುವ' ಆಚರಣೆ ಮಾಡುತ್ತಾರೆ. ಬೇವಿನ ಸೊಪ್ಪು ಗೋವಿನ ಗಂಜಲದ ಮೂಲಕ ಬಾಣಂತಿಯನ್ನು ಶುದ್ದಿಕರೀಸುತ್ತಾರೆ. ಈ ಸಮಯದಲ್ಲಿ ಮಗುವನ್ನು ಮೊರದಲ್ಲಿ ಇಟ್ಟು ಪೋಷಿಸುತ್ತಾರೆ. ಹಾಗೆಯೇ ಅನೇಕ ರೀತಿಯ ಭವಿಷ್ಯದ ಭಯಂಕರ ಕಾಯಿಲೆಗಳ ನಿಷೇಧಕ್ಕೆ ಕೆಲವೊಂದು ಪೂರ್ವ ಯೋಜಿತ ಮದ್ದುಗಳನ್ನು ಮಗುವಿಗೆ ಕುಡಿಸುತ್ತಾರೆ. ಇಲ್ಲಿಯೇ ಹೇಳಿಬಿಡಬಹುದಾದ ಸಂಗತಿ ಮಗುವಿನ ನಾಮಕರಣದ್ದು. ಮಗುವಿನ ಸೋದರತ್ತೆ ಹುರುಳಿ ಗುಗ್ಗರಿ ಗಂಟು ಹೊತ್ತು ಹೆಸರನ್ನು ಕರೆಯುತ್ತಾಳೆ. ಗುಗ್ಗರಿ ಗಂಟು ಹೊತ್ತು ಮೂರು ಬಾರಿ ಮನೆಯ ಹೊಸ್ತಿಲನ್ನು ದಾಟಿ ಹೆಸರು ಹೇಳುವ ಕ್ರಮ ಅತ್ಯಂತ ಗಮನರ್ಹಾವಾದುದಾಗಿದೆ.

**ಋತುಮತಿ ಆಚರಣೆ:**

ಋತುಮತಿ, ಹೆರಿಗೆ ಮೊದಲಾದವು ಕೃಷಿಮೂಲ ಸಂಸ್ಕೃತಿಗಳಲ್ಲಿ ಫಲವಂತಿಕೆಯ ಸಂಕೇತಗಳು ಆದರೆ ಬುಡಕಟ್ಟು ಸಮುದಾಯಗಳಲ್ಲಿ ಇವು ಮೈಲಿಗೆಯ ಸಂಗತಿಗಳು. ಬೇಡರಲ್ಲಿ ಋತುಮತಿ ಆದ ಹೆಣ್ಣನ್ನು ತಕ್ಷಣವೇ ಹೊರಗೆ ಕಳುಹಿಸಿ ಹಸಿರು ಸೊಪ್ಪಿನ (ವಿಷೇಶವಾಗಿ ಬೇವು/ಹೊಂಗೆ) ಗುಡಿಸಲು ನಿರ್ಮಿಸಿ ಅದರೊಳಗೆ ಬಿಡುತ್ತಾರೆ. ಒಂಬತ್ತು ಅಥವಾ ಹನ್ನೊಂದು ದಿನಗಳ ಕಾಲ ಋತುಮತಿಯಾದ ಹೆಣ್ಣುಮಗಳು ಆ ಗುಡಿಸಲಲ್ಲಿ ವಾಸಿಸುತ್ತಾಳೆ. ಈ ಮಧ್ಯೆ ನೆಂಟರಿಷ್ಟರು ರುಚಿ ರುಚಿಯಾದ ಬಗೆಬಗೆಯ ತಿಂಡಿ ತಿನಿಸುಗಳನ್ನು ಆಕೆಗೆ ಒದಿಗಿಸುವ ಕ್ರಮವಿದ್ದು ಇದನ್ನ ಒಸಗೆ ಎನ್ನುತ್ತಾರೆ. ಈ ಸಮಯ ಮುಗಿದ ದಿನ ಸ್ಥಾನ ಮಾಡಿಸಿ ಸೋದರ ಮಾವನ ಹತ್ತಿರ ಬೇವಿನ ಕಡ್ಡಿಯಿಂದ ನಾಲಗೆ ಸುಡಿಸಿ, ಗೋವಿನ ಗಂಜಲವನ್ನು ಪ್ರೋಕ್ಷಿಸಿ ಮನೆಯ ಒಳಗೆ ಕರೆದುಕೊಳ್ಳುತ್ತಾರೆ. ಗಮನಾರ್ಹ ಸಂಗತಿ ಎಂದರೆ ಕೆಲವು ಬೇಡ ಪ್ರದೇಶಗಳಲ್ಲಿ ಋತುಮತಿಯಾದ ತಕ್ಷಣ ಗುಡಿಸಲಿಗೆ ಕೂರಿಸದೆ, ಮದುವೆಯ ಸಂಪ್ರದಾಯಕ್ಕೆ ಆ ಸಂಪ್ರದಾಯವನ್ನು ನಡೆಸುತ್ತಾರೆ. ಗುಂಪು ಗುಂಪಾಗಿ ಮದುವೆ ಮಾಡುವಲ್ಲಿ ಎಲ್ಲಾ ಹೆಣ್ಣುಗಳನ್ನು ಒಂದೇ ಗುಡಿಸಲಿನೊಳಗೆ ಇರಿತಸುತ್ತಾರೆ. ಈ ಗುಂಪು ಗುಡಿಸಲಲ್ಲಿ ಇರುವಾಗ ಬಂಡೆಯಲ್ಲಿ ಆಹಾರ ಸ್ವೀಕರಿಸುವುದು ವಿಶೇಷ.

**ಮದುವೆ ಸಂಪ್ರದಾಯಗಳು:**

ಬೇಡರಲ್ಲಿ ವಿಶೇಷವಾಗಿ ಮ್ಯಾಸ ಬೇಡರಲ್ಲಿ ಪ್ರಚಲಿತ ಇರುವ ಮದುವೆಯ ಸಂಪ್ರದಾಯಗಳು ಆ ಸಮುದಾಯದ ಬುಡಕಟ್ಟು ಅನನ್ಯತೆಯನ್ನು ಪ್ರತಿಪಾದಿಸುತ್ತವೆ. ಮುಖ್ಯವಾಗಿ ಇಲ್ಲಿ ಹೆಣ್ಣಿಗೆ

ಪ್ರಧಾನ್ಯತೆ ಎಂಬುದನ್ನು ವಿಷೇಶವಾಗಿ ಗಮನಿಸಬೇಕು. ಹೆಣ್ಣಿನ ಕಡೆಯವರು ಗಂಡಿನ ಮನೆಗೆ ಬಂದು ಮದುವೆ ಮಾಡಿಕೊಳ್ಳವಂತೆ ಕೇಳುವುದು ಹೀಗಿರುವ ಕ್ರಮ. ಹಾಗೆಯೇ ಹೆಣ್ಣಿನ ಕಡೆಯವರು ವರದಕ್ಷಣೆ ಕೊಡಬೇಕಾದದು ಒಂದು ದೊಡ್ಡ ಸಾಮಾಜಿಕ ಸಮಸ್ಯೆಯಾಗಿದೆ. ಆದರೆ ಈಗಲೂ ಕೆಲವು ಬೇಡರ ಗುಂಪುಗಳಲ್ಲಿ ಇದಕ್ಕೆ ತದ್ವಿವಿರುದ್ದವಾದ ಸಂಗತಿಗಳು ಇವೆ. ಹೆಣ್ಣಿದ್ದ ಮನೆಗೆ ಗಂಡಿನ ಕಡೆಯವರು ಔಪಚಾರಿಕವಾಗಿ ಹಾಗೂ ಅನೌಪಚಾರಿಕವಾಗಿ ಮೊದಲು ತೆರಳಿ ಹೆಣ್ಣು ಕೇಳುವ ಕ್ರಮವಿದೆ. ವರದಕ್ಷಿಣೆ ಈಗೀಗ ಸ್ವಲ್ಪ ಪ್ರಮಾಣದಲ್ಲಿ ಚಾಲ್ತಿಗೆ ಬಂದಿದ್ದರೂ ವಧುದಕ್ಷಿಣೆ ಕೊಡುವ ಪದ್ದತಿ ಕಡ್ಡಾಯವಾಗಿದೆ. 'ಸುಖಮಂಚಿ' (ಕ್ಷೇಮ, ಸವಲತ್ತು) ಎನ್ನುವ ಹೆಸರಲ್ಲಿ ಗಂಡಿನ ಕಡೆಯವರು ಒಂದಿಷ್ಟು ಧಾನ್ಯವನ್ನು ಊರಿನ ಹಿರಿಯರ ಸಮ್ಮುಖದಲ್ಲಿ ಹೆಣ್ಣಿನ ಕಡೆಯವರಿಗೆ ಅಳೆದು ಕೊಡುವುದು ಒಂದು ಸಂಪ್ರದಾಯವಾಗಿದೆ.

ಮುಂಜಿ ಮ್ಯಾಸ ಬೇಡರ ಮದುವೆ ಸಮುದಾಯಗಳ ಮತ್ತೊಂದು ವಿಷೇಶ. ಮುಂಜಿ ಎನ್ನುವ ಈ ಸಂಪ್ರದಾಯವನ್ನು ಥರ್ಸ್ಟನ್ ಮೊದಲಾದ ಆರಂಭಿಕ ಅಧ್ಯಯನಕಾರರು ಮುಸ್ಲಿಂ ಸಮಾಜಗಳಲ್ಲಿ ಪ್ರಚಲಿತವಾಗಿ ಇರುವ ಮುಂಜಿ ಮಾಡಿಸುವ ಪದ್ದತಿಯೊಡನೆ ನಂಟು ಕಲ್ಪಿಸಿದ್ದಾರೆ. ಆದರೆ ಈಗಿರುವ ಕ್ರಮದಲ್ಲಿ ಅಂತ ಯಾವ ಅಂಶವು ಕಂಡುಬರುವುದಿಲ್ಲ. ಮದುವೆಗೆ ಗಂಡನ್ನು ಸಿದ್ದಮಾಡುವ ಕ್ರಮ ಇದಾಗದೆ. ಮದುವೆಯ ಮೊದಲ ಶಾಸ್ತ್ರದ ಮುನ್ನಾದಿನ ರಾತ್ರಿ ಮದುವೆಯ ಗಂಡಿಗೆ ದೇವರ ನೀರು ಹಾಕಿಸಿಕೊಂಡು ವಿಶಿಷ್ಟ ವೇಷದಲ್ಲಿ ( ಬರಿ ಮೈ ಒಂದು ಚಡ್ಡಿ ಧರಿಸಿ ಮೈಗೆ ಒಂದು ಕಂಬಳಿ ಕೋವಿ ಒದ್ದು ಕೈಯಲ್ಲಿ ಕವೆ ಕಟ್ಟಿಗೆ ಈ ಕವೆ ಕಟ್ಟಿಗೆಗೆ ಎಲೆ ಅಡಿಕೆ ಬೀಡಿ ಗಂಟುಕಟ್ಟಿರುತ್ತಾರೆ.) ಊರ ಹೊರಗೆ ಒಗುತ್ತಾರೆ. ಮರುದಿನ ಬೆಳಗ್ಗೆ ನಂಟರಿಷ್ಟರು ಒಸಗೆ ರೂಪದಲ್ಲಿ ತಂಡಿ ತಿನಿಸುಗಳನ್ನು ಒಯ್ದು ಕೊಡುತ್ತಾರೆ. ಹೀಗೆ ಸಂಗ್ರಹವಾದ ತಿನಿಸುಗಳನ್ನು ಬೇರೆಯಾರು ತಿನ್ನುವುದಿಲ್ಲ ಹಾದಿಹೊಕರ ಹತ್ತಿರ ಮದುವೆಯ ಗಂಡು ಹಣ ಸಂಗ್ರಹಿಸುತ್ತಾನೆ. ಹೀಗೆ ಒಂದು ದಿನ ಕಳೆದು (ಈಗ ಸಂಪ್ರದಾಯ ಒಂದು ದಿನ ಮಾತ್ರವಿದ್ದು ಮೊದಲು ಹನ್ನೊಂದು ದಿನ ನಡೆಯುತ್ತಿತ್ತೆಂದು ಹಿರಿಯರು ಹೇಳುತ್ತಾರೆ. ಹನ್ನೊಂದು ದಿನ ಊರಿಂದ ಹೊರಗೆ ಇರುತ್ತಿದ್ದ ಮದುವೆಯ ಗಂಡುಗಳು ಕಾಡಲ್ಲಿ ಭೇಟೆಯಾಡಿ ಮಾಂಸ ಮತ್ತಿತರ ವಸ್ತುಗಳನ್ನು ತಿನ್ನುತ್ತಿದ್ದರಂತೆ.) ಅಂದು ಸಾಯಂಕಾಲ ಸ್ನಾನ ಮಾಡಿ ಶುದ್ದರಾಗುತ್ತಾರೆ. ಇಂದೇ ಮದುವೆಯ ಋತುಮತಿ ಹೆಣ್ಣುಗಳನ್ನು ಗುಡಿಸಲಿಗೆ ಕೂರಿಸಿ ಒಳಗೆ ಕರೆದುಕೊಳ್ಳುವಾಗ ಮಾಡುವ ಕ್ರಮವನ್ನೇ ಇವರಿಗೂ ಅನುಸರಿಸಿ ಮನೆಯ ಒಳಗೆ ಕರೆದುಕೊಳ್ಳುತ್ತಾರೆ. ಇದನ್ನೇ ಮುಂಜಿ ಸಂಪ್ರದಾಯ ಎನ್ನುತ್ತಾರೆ.

ಬೇಡರಲ್ಲಿ ಮದುಮಗ ಕೈಯಲ್ಲಿ ಬಾಕು ಹಿಡಿಯುವ ಪದ್ದತಿ ಪ್ರಚಲಿತವಿದ್ದು ಇದು ಸ್ಪಷ್ಟವಾಗಿ ಬೇಡರ ಲೋಕದೃಷ್ಟಿಯನ್ನು ಬಿಂಬಿಸುತ್ತದೆ. ಈ ಇಲ್ಲಿ ಬಾಕನ್ನು ಮದುಮಗನ ಪ್ರತಿನಿಧಿಯೆಂದು ಭಾವಿಸುವುದು ವಿಶೇಷ.

‘ವೀಳ್ಯದ ಎಲೆ’ ಬೇಡರ ಮದುವೆಯಲ್ಲಿ ಅತ್ಯಂತ ಪ್ರಾಮುಖ್ಯತೆ ಪಡೆದ ವಸ್ತುವಾಗಿದೆ. ಬೇಡರ ಮದುವೆಗಳಿಗೆ ಬ್ರಾಹ್ಮಣ ಪರೋಹಿತರ ಬದಲಿಗೆ ಸಮುದಾಯದ ಹಿರಿಯರೇ ಪೌರೋಹಿತ್ಯ ವಹಿಸುವರು.

**ಸಾವಿನ ಆಚರಣೆಗಳು:**

ಬೇಡರಲ್ಲಿ ಸಾವಿನ ಸಂದರ್ಭಕ್ಕೆ ನಡೆಯುವ ಆಚರಣೆಗಳಲ್ಲಿ ಬುಡಕಟ್ಟು ಲಕ್ಷಣಗಳ ಹಿನ್ನಲೆಯಲ್ಲಿ ಮುಖ್ಯವಾಗುವ ಕೆಲವನ್ನು ಹೆಸರಿಸಬಹುದು.

- ಹೆಣಗಳನ್ನು ಕಲ್ಲುಪೊಟರುಗಳಲ್ಲಿ ಇಟ್ಟು ಕಲ್ಲು ಮುಚ್ಚುವ ಪದ್ದತಿ ಅನೇಕ ಬೇಡಗಳಲ್ಲಿ ಇಂದಿಗೂ ಕಾಣಬಹುದು.
- ಸತ್ತ ವ್ಯಕ್ತಿಯು ಕಾಗೆಯ ರೂಪದಲ್ಲಿ ಮೂರನೇ ದಿನ ತನ್ನ ಸಮಾದಿ ಸ್ಥಳದಲ್ಲಿ ಕುಟುಂಬದವರು ಹಾಕಿದ ಕೂಳನ್ನು ತಿನ್ನುತ್ತಾನೆ ಎನ್ನುವ ನಂಬಿಕೆಯ ಹಿನ್ನಲೆಯಲ್ಲಿ ‘ ಕೂಳು ಹಾಕುವ’ ಸಂಪ್ರದಾಯ ಸಮಾನ್ಯವಾಗಿ ಕಂಡುಬರುತ್ತದೆ.
- ಬೇಡ ಸಮುದಾಯದಲ್ಲಿ ದಿವಸ ಮಾಡುವಾಗ ಅದರ ಕಾರ್ಯವನ್ನು ಗುಡ್ಡೆ ಪೂಜಾರಿಗಳೆ ನೆರವೇರಿಸಬೇಕು. ಇದು ಗುಂಪಿನ ಐಕ್ಯತೆಯ ಬಾವವನ್ನು ಸೂಚಿಸುತ್ತದೆ.”[೨೫]

**೨.೪. ಬೇಡ ಬುಡಕಟ್ಟಿನ ವೈಶಿಷ್ಟ್ಯಗಳು**

“ಭಾರತ ಅನೇಕ ಬುಡಕಟ್ಟುಗಳಿಂದ ಕೂಡಿರುವ ದೇಶ. ಸಾವಿರಾರು ಬುಡಕಟ್ಟುಗಳು ಇಲ್ಲಿ ವಾಸಿಸುತ್ತಿದ್ದು. ತಮ್ಮದೇ ಆದ ವೈಶಿಷ್ಟ್ಯಗಳಿಂದ ಕೂಡಿರುತ್ತವೆ. ಅಂತವುಗಳಲ್ಲಿ ಈ ಬೇಡ ಬುಡಕಟ್ಟು ಒಂದಾಗಿದೆ. ಇದರ ಮೂಲ ಪ್ರಾಚೀನ ಕಾಲದ್ದು ಮೂಲತಃ ಆದಿ ಮಾನವನ ಕಾಲದಿಂದಲೂ ಈ ವರ್ಗ ಹಾಗೆಯೇ ಬಂದಿರುವಂತದ್ದು. ಇವರ ವೃತ್ತಿ ಆದಿಯಿಂದಲೂ ಬೇಟೆ ಆಡುವುದು, ಗೆಡ್ಡೆಗೆಣಸುಗಳನ್ನು ಬಗೆಯುವುದು, ಇವೇ ಅವರ ಆಹಾರದ ಮೂಲಗಳಾಗಿದ್ದವು ಆದರೆ. ಇಂದು ನಾಗರೀಕ ಜಗತ್ತಿಗೆ ಹೊಂದಿಕೊಂಡಿದ್ದಾರೆ.

ಬೇಡ ಬುಡಕಟ್ಟಿನಲ್ಲಿ ಎರಡು ಪಂಗಡಗಳು ಬರುತ್ತವೆ. ಒಂದು ಮ್ಯಾಸ ಬೇಡರು ಇನ್ನೊಂದು ಊರು ಬೇಡರು, ಊರ ಹೊರಗಿನ ಹಟ್ಟಿಬೇಡರನ್ನು ಮ್ಯಾಸ ಬೇಡರೆಂದು, ಊರೊಳಗೆ ಬಂದು ನೆಲೆಸಿದವರನ್ನು ಊರುಬೇಡರೆಂದು ಕರೆದಿದ್ದಾರೆ. ಆದರೆ ಇಂದು ಮ್ಯಾಸ ನಾಯಕರೂ ಸಹ ನಾಗರೀಕತೆಯಲ್ಲಿ ಸೇರಿ ಹೋಗಿದ್ದು ಇಂದು ಎರಡೂ ಪಂಗಡಗಳು ಊರೊಳಗೆ ವಾಸಿಸುತ್ತವೆ. ಇನ್ನೂ ಕೆಲವು ಜಿಲ್ಲೆಗಳಲ್ಲಿ ಮ್ಯಾಸರ ಹಟ್ಟಿಗಳು ಪ್ರತ್ಯೇಕವಿದ್ದು ತಮ್ಮ ತನವನ್ನು ಇನ್ನೂ ಉಳಿಸಿಕೊಂಡಿವೆ.

ಬಳ್ಳಾರಿ ಜಿಲ್ಲೆಯ ಕೊಡ್ಲಿಗಿ ತಾಲ್ಲೂಕಿನ ಕೆಲವು ಹಟ್ಟಿಗಳು ಹಾಗೂ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು, ಚಳ್ಳಕೆರೆ, ದಾವಣಗೆರೆ ಜಿಲ್ಲೆಯ ಜಗಳೂರು ಪ್ರದೇಶಗಳಲ್ಲಿ ಅಲ್ಲಲ್ಲಿ ಈ ಮ್ಯಾಸ ನಾಯಕರು ತಮ್ಮ ಹಟ್ಟಿಗಳಲ್ಲೇ ವಾಸಿಸುತ್ತಿರುವುದನ್ನು ನೋಡುತ್ತೆವೆ.

**ವೈಶಿಷ್ಟ್ಯಗಳು**

- ಮ್ಯಾಸ ಬೇಡರ ಉಡುಗೆ ತೊಡುಗೆಗಳು
- ಮ್ಯಾಸ ಬೇಡರ ಬೇಟೆವೃತ್ತಿ
- ಮ್ಯಾಸ ಬೇಡರ ಹಬ್ಬಹರಿದಿನ, ಆಚರಣೆಗಳು
- ಮ್ಯಾಸ ಬೇಡರ ಕಲೆಗಳು

ಮ್ಯಾಸ ಎನ್ನುವ ಪದವೇ ಇವರ ಉಪಜೀವನದ ವೃತ್ತಿಯನ್ನು, ಕಾಯಕವನ್ನು ಸೂಚಿಸುತ್ತದೆ. ಅಂದರೆ ಇವರು ದನಕರುಗಳನ್ನು, ಮೇಕೆಗಳನ್ನು ಕುರಿಗಳನ್ನು ಮೇಯಿಸಿಕೊಂಡು ಕಾಡುಗೊಲ್ಲರಂತೆಯೇ ಕೆಲವೊಂದು ಕಾಲದಲ್ಲಿ ಅಲೆಮಾರಿ ಯಾಗಿದ್ದವರು. ನಂತರದಲ್ಲಿ ಒಂದು ಕಡೆ ನೆಲೆಸಿ ಹಟ್ಟಿಗಳನ್ನು ನಿರ್ಮಿಸಿಕೊಂಡು ವಾಸಿಸತೊಡಗಿದರು.

ಈ ರೀತಿಯಿಂದ ಇವರು ಮೇಸರು> ಮೇಯಸುವವರು> ಮೇಯಿಸು> ಮ್ಯಾಸರು ಎಂದು ಕರೆದುಕೊಂಡಿದ್ದಾರೆ.

ಮ್ಯಾಸ ಬೇಡರು ಎಂಬ ಪದದಲ್ಲಿ ಎರಡು ವೃತ್ತಿ ಸೂಚಕ ಪದಗಳು ಕೂಡಿದ್ದು ಒಂದು ದನ ಮೇಯಿಸುವವರು ಇನ್ನೊಂದು ಬೇಟೆಯಾಡುವುದು. ಈ ವೃತ್ತಿಯಿಂದ ಇವರ ಜಾತಿಯನ್ನು ಮ್ಯಾಸ ಬೇಡರು ಎಂದು ಕರೆದುಕೊಂಡಿದ್ದಾರೆ.

**ಮ್ಯಾಸ ಬೇಡರ ಉಡುಗೆ ತೊಡುಗೆಗಳು**

ಈ ಬಡುಕಟ್ಟಿನವರು ಮದ್ಯಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಕಂಡುಬರುವಂತೆ ಇವರ ಉಡುಗೆ ತೊಡುಗೆಗಳು ವಿಶಿಷ್ಟವಾದವು ಇದರಲ್ಲಿ ಗಂಡಸರು ಚಲ್ಯಾಣವನ್ನು ತೊಡುತ್ತಾರೆ. ತಲೆಗೆ ದಪ್ಪನಾಗಿ ರೂಮಾಲು ಸುತ್ತುತ್ತಾರೆ. ಹೆಗಲ ಮೆಲೆ ಅಡ್ಡವಲ್ಲಿ ಅಥವಾ ಕಂಬಳಿಯನ್ನು ಹಾಕಿಕೊಳ್ಳುತ್ತಾರೆ. ಇನ್ನು ಹೆಂಗಸರು ಕುಪ್ಪಸವನ್ನು ತೊಡುವುದಿಲ್ಲ ಉಟ್ಟಸೀರೆಯ ಸೆರೆಗನ್ನೆ ಎದೆ ಮುಚ್ಚಿಕೊಳ್ಳಲು ಬಳಸುತ್ತಾರೆ. ಕಲವು ಕಡೆ ಗಂಡಸರು ಕಚ್ಚೆಪಂಚೆ ಹಾಕುತ್ತಾರೆ. ತೋಳಂಗಿ ತೊಡುತ್ತಾರೆ. ತಲೆಗೊಂದು ಟವಲು ಸುತ್ತಿರುತ್ತಾರೆ. ಇವು ಈ ಬುಟಕಟ್ಟಿನವರ ಉಡುಗೆಗಳಾಗಿವೆ. ಆದರೆ ಇಂದು ಅನೇಕ ಕಡೆ ನಾಗರೀಕತೆ ಹೊಂದಿಕೊಂಡ ಜನರ ಉಡುಗೆ ತೊಡುಗೆ ಬದಲಾಗದಿದೆ.

ಇನ್ನು ತೊಡುಗೆಗಳು ಎಂದರೆ ಕೈಕಡಗ, ತೋಳುಬಂದಿ, ಮಣಿಸರಗಳು, ಮುತ್ತಿನ ಸರಗಳು, ಓಲೆಗಳು, ಮೂಗತಿಗಳು, ಮೇಸರಿಗಳು, ಇತ್ಯಾದಿ ಆಭರಣಗಳನ್ನು ತೊಡುಗೆಯಾಗಿ ಬಳಸುತ್ತಾರೆ.

ಆದರೆ ಇಂದು ಆಧುನಿಕ ಜಗತ್ತಿನಲ್ಲಿ ಎಲ್ಲಾ ಕಡೆಯೂ ಇತ್ತೀಚಿನ ತೊಡುಗೆಗಳು ಬಳಕೆಯಾಗುತ್ತಿರುವುದನ್ನು ಕಾಣುತ್ತೇವೆ. ಬಂಗಾರ, ಬೆಳ್ಳಿ, ಆಭರಣಗಳನ್ನು ಉಳ್ಳವರು ಉಳ್ಳದವರೂ ಸಹ ಹಾಕುತ್ತಾರೆ.

**ಮ್ಯಾಸ ಬೇಡರ ಭೇಟೆ ಪೃತ್ತಿ**

ಈ ಬುಡಕಟ್ಟಿನವರ ಮೂಲ ಕಸಬು ಬೇಟೆಯಾಡುವುದೇ ಆಗಿದ್ದರೂ ಕೃಷಿಯನ್ನು ಅವಲಂಬಿಸಿದ್ದರು. ದನಕರುಗಳನ್ನು, ಮೇಕೆಗಳನ್ನು ಸಾಕುತ್ತಿದ್ದರು. ಈ ಜನಾಂಗಗಳಲ್ಲಿ ಬೇಟೆಯಾಡುವುದು ಆಸಕ್ತ ವಿಷಯ ಇವರಿಗೆ ಬೇಟೆ ಎಂದರೆ ಪಂಚಪ್ರಾಣ ಇವರು ತಮ್ಮ ಜೀವನದಲ್ಲಿ ಸಾಹಸ ಶೌರ್ಯ ಪ್ರವೃತ್ತಿಉಳ್ಳವರು ಕಾಡು ಪ್ರಾಣಿಗಳನ್ನು ಭೇಟೆಯಾಡುವುದರಲ್ಲಿ, ಪಳಗಿಸುವಲ್ಲಿಯು ಸಹ ನಿಪುಣರಾಗಿದ್ದರು. ಹುಲಿಗಳನ್ನು ಪಳಗಿಸಿದ ಅನೇಕ ಉದಾಹರಣೆಗಳು ದೊರೆಯುತ್ತವೆ. ಮ್ಯಾಸ ಬೇಡ ಪ್ರಥಮ ಕಾರ್ಯಗಳನ್ನು ನೋಡಿದರೆ ಇಂತಹ ಅನೇಕ ಸಂಗತಿಗಳು ದೊರೆಯುತ್ತವೆ.

ಮೊಲ, ಜಿಂಕೆ,ಕಾಡುಹಂದಿ, ಮುಳ್ಳುಹಂದಿ, ಉಡ, ಇತ್ಯಾದಿ ಪ್ರಾಣಿಗಳನ್ನು ಭೇಟೆಯಾಡುತ್ತಿದ್ದರು. ಇಂದಿಗೂ ಇವರಲ್ಲಿ ಈ ಪ್ರವೃತ್ತಿಯನ್ನು ಕಾಣುತ್ತೇವೆ. ಯುಗಾದಿ ಹಬ್ಬದಲ್ಲಿನ ಆಚರಣೆಯಲ್ಲಿ ಎರಡನೇ ದಿನ ಭೇಟೆಗೆ ಹೊಗುತ್ತಾರೆ. ಈ ಭೇಟೆಯು ಊರಿನ ಗೌರವ ಸ್ವಾಭಿಮಾನದ ಪ್ರಶ್ನೆಯಾಗಿರುತ್ತದೆ. ನಾಯಿಯನ್ನು ಬೇಟೆಯ ಸಹಾಯಕ್ಕಾಗಿ ಸಾಕುತ್ತಾರೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಕೆಲವು ಹಳ್ಳಿಗಳಲ್ಲಿ ಇಂದಿಗೂ ಭೇಟೆ ಸಂಸ್ಕೃತಿ ಇರುವುದನ್ನು ನೊಡಬಹುದು. ಮತ್ತು ಸಂಡೂರು ತಾಲ್ಲೂಕಿನ ಕೆಲವು ಹಳ್ಳಿಗಳಲ್ಲಿ ಇಂದಿಗೂ, ಚಿತ್ರದುರ್ಗ ಜಿಲ್ಲೆಯ ಕೆಲವು ಹಳ್ಳಿಗಳಲ್ಲಿಯೂ ಬೇಟೆಗಾರಿಕೆಯು ಉಳಿದಿರುವುದನ್ನು ನೋಡುತ್ತೇವೆ.

**ಮ್ಯಾಸ ಬೇಡರ ಹಬ್ಬಹರಿದಿನ ಮತ್ತು ಆಚರಣೆಗಳು**

ಈ ಜನಾಂಗದವರು ಅರಣ್ಯವಾಸಿಗಳು ಆಗಿದ್ದರು. ಇವರು ತಮ್ಮದೇ ಆದ ಹಬ್ಬ ಹರಿದಿನಗಳನ್ನು ಆಚರಿಸುತ್ತದ್ದರು. ಮ್ಯಾಸರು ಹಟ್ಟಿ ವಾಸಿಗಳು ಆಗಿದ್ದು ಅವರು ತಮ್ಮ ಹಟ್ಟಿಗಳಲ್ಲಿ ತಮ್ಮ ಕುಲದೇವತೆಯ ಆರಾಧನೆ ಪ್ರಮುಖವಾಗಿತ್ತು ಒಂದೊಂದು ಹಟ್ಟಿಯವರು ಅವರ ಜನಾಂಗದ ದೇವತೆಗಳ ಹೆಸರಿನಲ್ಲಿ ಆಚರಿಸುವ ಜಾತ್ರೆಗಳೇ ಅವರಿಗೆ ಹಬ್ಬದಂತೆ. ಆದರೆ ಈಗ ಹಟ್ಟಿಯೊಳಗಿನ ಬೇಡ ನಾಯಕರು ಸಹ ನಾಗರೀಕತೆಯಿಂದಾಗಿ ಎಲ್ಲರೂ ಆಚರಿಸುವ ಹಬ್ಬಗಳನ್ನು ಆಚರಿಸುತ್ತಾರೆ. ಇಂದಿನ ದಿನಗಳಲ್ಲಿ ಅವರು ಹಿರಿಯರ ಹಬ್ಬ, ಗುಗ್ಗರಿ ಹಬ್ಬ, ಪಂಚಮಿ ಹಬ್ಬ, ಮುಂಗಾರಿನಲ್ಲಿ ಸುಗ್ಗಿ ಹಬ್ಬ ಮನೆದೇವರ ಜಾತ್ರೆ ಇತ್ಯಾದಿ ಹಬ್ಬಗಳನ್ನು ಆಚರಿಸುತ್ತಿದ್ದರು.

**ಮ್ಯಾಸ ಬೇಡರ ಕಲೆಗಳು**

ಮ್ಯಾಸ ಬೇಡ ಬುಡಕಟ್ಟಿನ ಸ್ತ್ರೀ ಪುರುಷರು ಕಲಾವಂತಿಕೆ ಉಳ್ಳವರಾಗಿದ್ದರು. ಹಾಡು, ಕಥೆಗಳನ್ನು ಕಟ್ಟುತ್ತಿದ್ದರು. ಬೇರೆ ಬೇರೆ ಆಚರಣೆ ಸಂದರ್ಭದಲ್ಲಿ ವಿಷೇಶವಾದಂತಹ ಕಲೆಗಳನ್ನು ಪ್ರದರ್ಶಿಸುತ್ತಿರುವುದನ್ನು ಇಂದಿಗೂ ಸಹ ಕಾಣುತ್ತೇವೆ. ದೇವರ ಮೇಲಿನ ತ್ರಿಪದಿ ಹಾಡುಗಳನ್ನು ಹೆಂಗಸರು ಇಂದಿಗೂ ಹಾಡುತ್ತಾರೆ. ಸ್ತುತಿಗೀತೆಗಳನ್ನು ಹಾಡುತ್ತಾರೆ. ಮಳೆಬಾರದೇ ಇದ್ದಾಗ ಮಳೆರಾಯನ ಮೇಲೆ ಪದಕಟ್ಟಿ ಆಡುತ್ತಾರೆ. ಸೋಬಾನೆ ಪದಗಳು ಮದುವೆ ಸಂದರ್ಭದ ಹಾಡುಗಳು ಇವರಲ್ಲಿನ ಕಲೆಯನ್ನು ಸೂಚಿಸುತ್ತವೆ.

ಜಾನಪದ ಕಲೆಗಳೆಂದು ಗುರುತಿಸಲಾದ ಕೋಲಾಟ ಜಾತ್ರೆ ಸಂಧರ್ಭದಲ್ಲಿ ಅಂದರೆ ಉದಾಹರಣೆಗೆ ಮಾರಿಜಾತ್ರೆ ದುರ್ಗಿಜಾತ್ರೆ ಮುಂತಾದ ಜಾತ್ರೆಗಳಲ್ಲಿ 'ಗಾವು ಜಿಗಿಯುವುದು, ಇದನ್ನು ಪೋತರಾಜರು ಮಾಡುತ್ತಾರೆ. ವರ್ಣಾಲಂಕೃತವಾಗಿ ಕೇಕೆ ಹಾಕಿಕೊಂಡು ಚಾಟಿಯಿಂದ ತಮ್ಮ ಮೈಯನ್ನು ಹೊಡೆದುಕೊಳ್ಳುತ್ತಾ ಕುಣಿಯುತ್ತಾ ಗಾವು ಜಿಗಿಯುತ್ತಾರೆ. ಇಂದೊಂದು ವಿಷೇಶವಾದ ರೌದ್ರಮಯವಾದ ಕಲೆಯಾಗಿರುತ್ತದೆ.

**ಬೇಡರ ಬೆಡಗುಗಳು**

- ನೆಲ್ಲಬಾಮುಡ್ಲು
- ಎನುಮುಲರು
- ದೊಣಮಂಡ್ಲು
- ಗಟ್ಟಮತ್ತೆ
- ಸೂರ್ಯಕಾಮ
- ಮಂದ್ಲಾರು
- ದಡ್ಡಿದಾಸರಿ
- ಓಬಲಿನಾಯಕರು
- ಪೂಲಾರು
- ಕಾಮಗೇತ್ಲರು
- ಪಾಲಜ್ಜಿಯವರು
- ಕೋಸಲವರು
- ಗುಜ್ಜುಡ್ಲು

- ಬೋಸುರ್ಲು ಇತರೆ ಬೆಡಗುಗಳು ಇವೆ."[೬]

ಒಟ್ಟಿನಲ್ಲಿ ಬುಡಕಟ್ಟು ಸಂಸ್ಕೃತಿಯಲ್ಲೇ ಈ ಬೇಡ ಬುಡಕಟ್ಟು ಸಂಸ್ಕೃತಿ ವೈಶಿಷ್ಟ್ಯವಾದದ್ದು. ಇವರ ಜೀವನ ಮತ್ತು ಸಮಾಜ ವ್ಯವಸ್ಥೆ, ಆಚರಿಸುವ ಹಬ್ಬಗಳು ಸಂಪ್ರದಾಯದ ಆಚರಣೆಗಳು, ವೃತ್ತಿ, ಉಪವೃತ್ತಿ, ಕಲೆ, ಹ್ಾಗೂ ಬೇಟೆಗಾರಿಕೆ, ಮದುವೆ ಸಂಪ್ರದಾಯ, ಇತ್ಯಾದಿ ಆಚರಣೆಗಳು ಬಹುವಿಶಿಷ್ಟವಾಗಿವೆ. ಇದೊಂದು ಅಧ್ಯಯನಶೀಲ ಬುಡಕಟ್ಟು ಎಂಬುದರಲ್ಲಿ ಸಂಶಯವೇ ಇಲ್ಲ. ಇನ್ನೂ ಸಾಕಷ್ಟು ವಿಧಾನದಲ್ಲಿ ಅಧ್ಯಯನ ಮಾಡುವ ಅಗತ್ಯವೂ ಇದೆ.

**ಅಡಿಟಿಪ್ಪಣಿ**

೧. ಮೈತ್ರಿ ಕೆ.ಎಂ. ಬುಡಕಟ್ಟು ಕುಲಕಸುಬುಗಳು, ೨೦೦೨. ಪುಟ.೭

೨. ತಾರಿಹಳ್ಳಿ ಹನುಮಂತಪ್ಪ, ಕರ್ನಾಟಕ ಬುಡಕಟ್ಟು ಸಮುದಾಯಗಳು, ೨೦೧೦. ಪುಟ.೬೫

೩. ಮೈತ್ರಿ ಕೆ.ಎಂ. ಬುಡಕಟ್ಟು ಕುಲಕಸುಬುಗಳು, ೨೦೦೨. ಪುಟ.೨೦

೪. ವಿರೂಪಾಕ್ಷಿ ಪೂಜಾರಹಳ್ಳಿ, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ೨೦೦೨. ಪುಟ.೧೮

೫. ವಿರೂಪಾಕ್ಷಿ ಪೂಜಾರಹಳ್ಳಿ, ಬೇಡಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ, ೨೦೦೮. ಪುಟ.೧೧೭

೬. ಅದೇ ಪುಟ.೧೨೯

# ಅಧ್ಯಾಯ ೩
# ತಳವಾರರ ಹಿನ್ನೆಲೆ

## ಅಧ್ಯಾಯ ೩

## ತಳವಾರರ ಹಿನ್ನೆಲೆ

ಯಾವುದೇ ಒಂದು ದೇಶ, ನಾಡು ಹಾಗೂ ಅಲ್ಲಿ ವಾಸಿಸುವ ಜನಾಂಗ ಜೀವನ ಮತ್ತು ವೃತ್ತಿ ಬದುಕನ್ನು ತಿಳಿಯಬೇಕಾದರೆ ಆ ಕುರಿತು ಕೆಲವು ಮೂಲಾಧಾರಗಳ ಅಧ್ಯಯನ ಮಾಡಬೇಕಾಗುತ್ತದೆ. ಮಾನವ ಸಮಾಜ ವ್ಯವಸ್ಥೆಗಳ ಸಮಗ್ರ ಅಧ್ಯಯನದ ದೃಷ್ಟಿಯಿಂದ ಒಟ್ಟು ಮಾನವನ ಸಂಸ್ಕೃತಿಯನ್ನು ಹಾಗೂ ಅವರ ಜೀವನವಿಧಾನವನ್ನು ಅರಿಯುವ ಕಾರಣದಿಂದ ಹಾಗೂ ಪ್ರತಿಯೊಂದು ಸಮಾಜದ ಮತ್ತು ಅವರ ವೃತ್ತಿಯ ಬಗೆಗಿನ ಅಧ್ಯಯನ ಮಾಡುವ ಅಗತ್ಯವಿದೆ. ಆರಂಭದಲ್ಲಿ ವೃತ್ತಿ ಜೀವನವು ಅನಿವಾರ್ಯವಾಗಿ ಕಂಡರೆ ಅನಂತರ ಪ್ರವೃತ್ತಿಯಾಗಿ ದಿನನಿತ್ಯದ ಸಾಮಾಜಿಕ ಜೀವನದಲ್ಲಿ ಒಂದು ಅಂಗವಾಗಿ ಕಂಡುಬಂದಿದೆ. ಇಂತಹ ಕೆಲವು ವೃತ್ತಿಗಳ ಅಧ್ಯಯನ ಎಂದ ತಕ್ಷಣ ಆ ವೃತ್ತಿಗೆ ಹಿನ್ನೆಲೆಯಾದ ಪ್ರವೃತ್ತಿಗಳನ್ನು ಹಾಗೂ ಜೀವನ ವಿಧಾನಗಳನ್ನು ಅಭ್ಯಸಿಸಬೇಕಾಗುತ್ತದೆ. ಅದೇ ರೀತಿ ವೃತ್ತಿಯ ಹಿನ್ನೆಲೆಯಿಂದ ಉಂಟಾದ ಕೆಲವು ಜಾತಿ, ಜನಾಂಗ, ಪಂಗಡದ ಕುರಿತು ವಿವೇಚಿಸಬೇಕಾಗುತ್ತದೆ. ಈ ಹಿನ್ನೆಲೆಯಿಂದ 'ತಳವಾರ' ವೃತ್ತಿಯಲ್ಲಿರುವ ಅದರಲ್ಲೂ ಪ್ರಾತಿನಿಧಿಕವಾಗಿ ಬೇಡ ನಾಯಕ ಸಮುದಾಯಕ್ಕೆ ಸೇರಿದ ತಳವಾರರ ಸಾಂಸ್ಕೃತಿಕ ಪರಂಪರೆ ಮತ್ತು ವೃತ್ತಿ ಹಿನ್ನೆಲೆಯನ್ನು ತಿಳಿಯಪಡಿಸುವುದಾಗಿದೆ.

ಒಂದು ವೃತ್ತಿಸಂಬಂಧಿತ ಅಧ್ಯಯನವು ಇಂದು ಸಮಾಜವಿಜ್ಞಾನದ ಪ್ರಮುಖ ಅಂಗಗಳಲ್ಲಿ ಒಂದಾಗಿದೆ. ಮಾನವಕುಲ ತನ್ನ ಸಮುದಾಯದೊಂದಿಗೆ ಐಕ್ಯಮತ ಸಾಧಿಸಿ ಅಧಿಕಾರಾನ್ವೇಷಣೆಯ ವಿದ್ಯೆಯಲ್ಲಿ ಪರಿಣತಿಯನ್ನು ಪಡೆದು, ಮಾನವ ಕುಲಕ್ಕೆ ಶ್ರೇಷ್ಠವೆಂದು ಭ್ರಮಿಸಿದ್ದಾನೆ. ಆಳುವ ವರ್ಗ ಮತ್ತು ಆಳಿಸಿಕೊಳ್ಳುವವರ ನಡುವೆ ಕೊಂಡಿಯಾಗಿರುವ ತಳವಾರರು ನಾಗರಿಕತೆ ಮತ್ತು ಸಂಸ್ಕೃತಿಗಳಿಗೆ ತನ್ನದೇ ಆದ ವಿಶಿಷ್ಟ ಅಸ್ಮಿತೆ ಇತಿಹಾಸದುದ್ದಕ್ಕೂ ಇರುವುದನ್ನು ಗಮನಿಸಬಹುದು. ಇಂತಹ ವಿಶಿಷ್ಟ ವೃತ್ತಿಯನ್ನು ಪಾರಂಪರಿಕವಾಗಿ ತಮ್ಮ ಮುಂದಿನ ಪೀಳಿಗೆಗೂ ಮುಂದುವರಿಸಿಕೊಂಡು ಬಂದ ತಳವಾರರ ವೃತ್ತಿಯ ಹಿನ್ನೆಲೆಯನ್ನು ಗುರುತಿಸುವುದು ಅವಶ್ಯಕ.

### ೩.೧. ತಳವಾರ ಪದ ನಿಷ್ಪತ್ತಿ

ಒಂದು ಭಾಷೆಯ ಬೆಳವಣಿಗೆಯಲ್ಲಿ ಪ್ರತಿಯೊಂದು ಶಬ್ದಕ್ಕೂ ಮಹತ್ವದ ಸ್ಥಾನವಿರುತ್ತದೆ. ಆ ಶಬ್ದಗಳ ಮೂಲವನ್ನು ಪರಿಶೀಲಿಸಿ, ಅವುಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಕೈಗೊಂಡಾಗ ಭಾಷೆಯ ಚರಿತ್ರೆಯಲ್ಲಿ ಮತ್ತು ಒಂದು ಜನಾಂಗದ ಹಿನ್ನೆಲೆಯಲ್ಲಿ ಆ ಶಬ್ದದ ಪ್ರಾಮುಖ್ಯತೆ ತಿಳಿದುಬರುತ್ತದೆ. ಇಂಥ ಶಬ್ದಗಳ ಆಂತರ್ಯವನ್ನು ಅರಿಯಲು ಪ್ರಯತ್ನಿಸಿದ ಭಾಷಾತಜ್ಞರಿಗೆ ರೋಚಕ ಮತ್ತು ದಿಗ್ಭ್ರಮೆ ಸಾಮಾನ್ಯ ಸಂಗತಿ. ಒಂದು ಜನಾಂಗವನ್ನು ಬೆಳೆಸುವ ಮೊದಲು ಒಂದು ಭಾಷೆಯನ್ನು ಬೆಳೆಸಬೇಕು ಎಂಬ ಮಾತು ಅಕ್ಷರಶಃ ಸತ್ಯ. ಭಾಷೆಯೂ ಭಾವದ ವಾಹಕವಾಗಿರುವಂತೆ ಸಂಪರ್ಕ ಸಾಧನವೂ

